








ಪ್ರಕಾಶಕರು
**ಇಂದ್ರಮ್ಮ.ಹೆಚ್.ವಿ.**
ರಿಜಿಸ್ಟ್ರಾರ್, ಕರ್ನಾಟಕ ಲಲಿತಕಲಾ ಅಕಾಡೆಮಿ, ಕನ್ನಡ ಭವನ, ಜೆ.ಸಿ.ರಸ್ತೆ,
ಬೆಂಗಳೂರು-560002
ದೂರವಾಣಿ: 080-22480297, www.lalitkalakarnataka.org,
e-mail: kla.karnataka@gmail.com

---

**ಸುವರ್ಣ ಕಲಾವಿದರು**



**ಮೊದಲ ಮುದ್ರಣ:** 2017

**ಪುಟಗಳು:** 52

**ಬೆಲೆ:** 250/- ರೂ.

**ಪ್ರತಿಗಳು:** 500

**ಆಕಾರ:** ಕ್ರೌನ್ 1/4

**ಮುದ್ರಣಾ ಕಾಗದ:** 130 ಜಿ.ಎಸ್.ಎಮ್, ಆರ್ಟ್ ಪೇಪರ್

---

ಪ್ರಕಟಣಾ ಸಮಿತಿ:
**ಎಸ್.ಜಿ.ವಾಸುದೇವ್**
**ಕೆ. ವಿ. ಸುಬ್ರಮ್ಮಣ್ಯಂ**
**ಬಾಗೂರು ಮಾರ್ಕಂಡೇಯ**
**ಜಿ. ಎಲ್. ಚವ್ಹಾಣ್**
**ರಾಜು ಮಳವಳ್ಳಿ**

---

ಸಂಪಾದಕರು
**ರಾಜು ಮಳವಳ್ಳಿ**
ಪ್ರಧಾನ ಸಂಪಾದಕರು
**ಡಾ. ಎಂ. ಎಸ್. ಮೂರ್ತಿ**
ಅಧ್ಯಕ್ಷರು, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು
ಬರಹ
**ಎನ್. ಜಗನ್ನಾಥ್ ಪ್ರಕಾಶ್**

---

ಮುದ್ರಣ
**ಮುದ್ರಣ ಪರಂಪರ**
ಬೆಂಗಳೂರು-560085
ಮೊಬೈಲ್: 95355 50250



# ಸುವರ್ಣ ಕಲಾವಿದರು

ಪ್ರಧಾನ ಸಂಪಾದಕರು

**ಡಾ. ಎಂ. ಎಸ್. ಮೂರ್ತಿ**

ಸಂಪಾದಕರು

**ರಾಜು ಮಳವಳ್ಳಿ**



## ಪ್ರಧಾನ ಸಂಪಾದಕರ ನುಡಿ

**ಸುವರ್ಣ ಕಲಾವಿದರು**–ಐವತ್ತು ವರ್ಷಗಳ ಕಲಾ ಇತಿಹಾಸದಲ್ಲಿ ತಮ್ಮ 'ಚಿತ್ರ'ವನ್ನು ದಾಖಲಿಸಿದ ಕಲಾವಿದರ ಮಾಹಿತಿಯ ಸಂಗ್ರಹವಿದು. ಸುವರ್ಣ ಸಂಭ್ರಮದ ನಮ್ಮ ಅವಧಿಯಲ್ಲಿ ಇಂತಹುದೊಂದು ಸಮಗ್ರ ಕಲಾವಿದರ ಸಂಗ್ರಹಯೋಗ್ಯ ಗ್ರಂಥ ಹೊರತರಬೇಕೆಂಬ ಮಹತ್ವಾಕಾಂಕ್ಷೆ ನಮ್ಮೆಲ್ಲರದ್ದಾಗಿತ್ತು. ಉತ್ಸಾಹದಿಂದ ಪ್ರಾರಂಭವಾದ ಈ ಪ್ರಕ್ರಿಯೆ ಅನೇಕ ಕಾರಣಗಳಿಂದ ಕುಂಟುತ್ತಾ ಸಾಗಿತು. ಅಕಾಡೆಮಿಯ ನಮ್ಮ ಕಾಲಾವಧಿಯ ಕೊನೆಯ ದಿನದವರೆವಿಗೂ ಇದರ ಕೆಲಸ ನಡೆದು ಅಂತೂ ಈ ಪುಸ್ತಕ ನಿಮ್ಮ ಕೈಯಲ್ಲಿದೆ. ಸಮುದಾಯದ ಋಣ ತೀರಿಸುವ ಇಂತಹಾ ಕೆಲಸಗಳು ಬಹಳ ಆಸ್ಥೆಯಿಂದ, ಪ್ರೀತಿಯಿಂದ ಮತ್ತು ಬದ್ಧತೆಯಿಂದ ಮಾಡಬೇಕಾಗುತ್ತದೆ. ನಮ್ಮ, ನಮ್ಮ ಎಲ್ಲಾ ಅಹಂಮಿಕೆಗಳು ಕಿಂಚಿತ್ತೂ ಸುಳಿಯದಂತೆ ನಿಷ್ಠೆಯಿಂದ ಮಾಡುವ ಈ ಚಾರಿತ್ರಿಕ ಕೆಲಸಗಳು ನಮ್ಮ ವ್ಯಕ್ತಿತ್ವವನ್ನು ಮುಂದಿನ ಸಮಾಜಕ್ಕೆ ಕಾಣಿಸುತ್ತದೆ. ಹಾಗೇ ನಮ್ಮ ವ್ಯಕ್ತಿತ್ವವೂ ಕಾಲದೊಂದಿಗೆ ಸಹಜವಾಗಿ ಸಂಯಮ, ವಿವೇಕವನ್ನು ತುಂಬಿಕೊಳ್ಳುತ್ತದೆ. ಈ ಎಲ್ಲವನ್ನು ನಿರೀಕ್ಷಿಸಿ, ವಹಿಸಿದ ಜವಾಬ್ದಾರಿಯಿಂದ ನುಣುಚಿಕೊಂಡ, ನಂಬಿದ ಜನರು ನಡು ನೀರಿನಲ್ಲಿ ಕೈಬಿಟ್ಟಾಗ ಹೇಗೋ ದಡ ಮುಟ್ಟಿದ್ದೇವೆ.

ಇಂತಹಾ ಅನಿರೀಕ್ಷಿತ ಅಘಾತಗಳು, ಸಂದಿಗ್ಧ ಪರಿಸ್ಥಿತಿಯಲ್ಲೂ ಆಡಿದ ಮಾತಿಗೆ ತಪ್ಪದೆ ಪರಿಸ್ಥಿತಿಯನ್ನು ನಿಭಾಯಿಸಿದ್ದೇವೆ. ಇದಕ್ಕೆ ಸಮುದಾಯದ ಪ್ರೀತಿ, ಸಹಕಾರ ಕಾರಣ. ಈ ಗ್ರಂಥದ ಕೊನೆಯಲ್ಲಿ ಕಣ್ತಪ್ಪಿ, ಮಾಹಿತಿ ಕೊರತೆಯಿಂದ ಬಿಟ್ಟುಹೋದ ಯಾವುದೇ ಹೆಸರು, ವಿವರಗಳು ಅಧಿಕೃತವಾಗಿ ಲಭ್ಯವಾದಲ್ಲಿ ಮುಂದಿನ ಸಂಪುಟದಲ್ಲಿ ಸೇರಿಸಿ ಪ್ರಕಟಿಸಲಾಗುವುದು.

ಈ ಗ್ರಂಥ ತರುವಲ್ಲಿ ಸಹಕರಿಸಿದ ಅಕಾಡೆಮಿಯ ರಿಜಿಸ್ಟ್ರಾರ್, ರಾಜುಮಳವಳ್ಳಿ, ಜಗನ್ನಾಥ ಪ್ರಕಾಶ್, ಓ.ವೆಂಕಟೇಶ್ ಮತ್ತು ಪ್ರಕಟಣಾ ಸಮಿತಿ ಸದಸ್ಯರು ಎಲ್ಲರನ್ನೂ, ಅಕಾಡೆಮಿಯ ಎಲ್ಲರ ಪರವಾಗಿ ಕೃತಜ್ಞತೆಯಿಂದ ನೆನೆಯುತ್ತೇನೆ.

ಎಂ.ಎಸ್. ಮೂರ್ತಿ

ಡಾ.ಎಂ.ಎಸ್.ಮೂರ್ತಿ
ಅಧ್ಯಕ್ಷರು, ಕರ್ನಾಟಕ ಲಲಿತಕಲಾ ಅಕಾಡೆಮಿ

04.08.2017
ಬೆಂಗಳೂರು

## ಪದ್ಮಶ್ರೀ ಪ್ರಶಸ್ತಿ ಪುರಸ್ಕೃತರು



### ಎಸ್.ಎನ್. ಸ್ವಾಮಿ

ಭಾವಚಿತ್ರ ರಚನೆಯಿಂದಲೇ ಪ್ರಖ್ಯಾತರಾದ ಎಸ್.ಎನ್. ಸ್ವಾಮಿ ಮೈಸೂರಿನವರು. ಪ್ರಖ್ಯಾತ ಶಿಲ್ಪಿ ಸಂಗಣ್ಣಾಚಾರ್ಯರ ಪುತ್ರರಾದ ಸ್ವಾಮಿ ಅವರು ರೇಖಾಚಿತ್ರ ರಚನೆ ಮೂಲಕ ಕಲಾ ಪ್ರಪಂಚಕ್ಕೆ ಕಾಲಿಟ್ಟರು. ವಿಶ್ವಕವಿ ರವೀಂದ್ರನಾಥ ಟ್ಯಾಗೋರ್ ಅವರ ಭಾವಚಿತ್ರ ರಚಿಸಿ ರವೀಂದ್ರರಿಂದಲೇ ಮೆಚ್ಚುಗೆ ಪಡೆದ ಎಸ್.ಎನ್. ಸ್ವಾಮಿ ಅವರು ಕಲಾ ವ್ಯಾಸಾಂಗ ಮಾಡಿದ್ದು ಮುಂಬೈನ ಜೆ.ಜೆ. ಕಲಾಶಾಲೆಯಲ್ಲಿ. ಬಾಪೂಜಿ, ಎಂ. ವಿಶ್ವೇಶ್ವರಯ್ಯ, ನೆಹರೂ, ಸಿ. ರಾಜಗೋಪಾಲಾಚಾರಿ, ರಾಜೇಂದ್ರ ಪ್ರಸಾದ್, ಲಾರ್ಡ್ ಮೌಂಟ್ ಬ್ಯಾಟನ್ ಮುಂತಾದ ದೇಶ ವಿದೇಶಿ ಗಣ್ಯರ ಭಾವಚಿತ್ರಗಳನ್ನು ರಚಿಸಿದ ಸ್ವಾಮಿ ಚಿತ್ರ ರಚನೆಯಂತೆ ನೃತ್ಯ ಕಲೆಯಲ್ಲೂ ಪರಿಣತರು.

ರೇಖಾಚಿತ್ರ , ತೈಲ ಭಾವಚಿತ್ರ ರಚನೆಯಲ್ಲಿ ದೇಶದ ಅಗ್ರಗಣ್ಯ ಕಲಾವಿದರಾಗಿ ಕನ್ನಡ ನಾಡಿಗೆ ಗೌರವ ತಂದವರು ಎಸ್.ಎನ್. ಸ್ವಾಮಿಯವರು.



### ಕೆ.ಕೆ. ಹೆಬ್ಬಾರ್

ಕಟ್ಟಿಂಗೇರಿ ಕೃಷ್ಣ ಹೆಬ್ಬಾರ್ ಅಂತರರಾಷ್ಟ್ರೀಯ ಚಿತ್ರಕಲಾವಿದರು. ಪ್ರಾಥಮಿಕ ಶಾಲಾ ಶಿಕ್ಷಕರಾಗಿದ್ದ ಹೆಬ್ಬಾರ್ ಆರಂಭದಲ್ಲಿ ಕಲಾ ಶಿಕ್ಷಣ ಪಡೆದಿದ್ದು ಮೈಸೂರಿನ ಚಾಮರಾಜೇಂದ್ರ ಕಲಾಶಾಲೆಯಲ್ಲಿ. ಮುಂಬೈನ ಜಿ.ಎಸ್. ದಂಡಾವತಿಮಠ್ ಅವರ ನೂತನ ಕಲಾಮಂದಿರದಲ್ಲಿ ಕಲಾ ಅಧ್ಯಯನ ಮಾಡಿ ರೇಖಾ ಹಾಗೂ ವರ್ಣ ಚಿತ್ರಕಲೆಗಳಲ್ಲಿ ಹೆಚ್ಚಿನ ವ್ಯಾಸಂಗ ಮಾಡಿ, ಅಧ್ಯಾಪಕರಾಗಿ ಕಾರ್ಯ ನಿರ್ವಹಿಸಿದ್ದು ಮುಂಬೈನ ಜೆ.ಜೆ. ಕಲಾ ಶಾಲೆಯಲ್ಲಿ. ಪಾಶ್ಚಾತ್ಯ ಕಲೆಯಿಂದ ಪ್ರಭಾವಿತರಾದರೂ ಭಾರತೀಯ ಪುರಾತನ ಚಿತ್ರ ಸಂಪ್ರದಾಯಕ್ಕೆ ಹೊಸ ಸ್ಪರ್ಶ  ಕೊಟ್ಟ ಹೆಬ್ಬಾರರು ಜನಸಾಮಾನ್ಯರ ಜೀವನ ಸೌಂದರ್ಯವನ್ನು ತಮ್ಮ ಕೃತಿಗಳಲ್ಲಿ ಸಮರ್ಥವಾಗಿ ಹಿಡಿದಿಡುವ ಮೂಲಕ ಪ್ರಸಿದ್ಧರಾದರು. ಭಾರತೀಯ ಪ್ರಾಚೀನ ಕಲೆಗೆ ಹೊಸದೊಂದು ಮೆರಗು ನೀಡಿದ ಹೆಬ್ಬಾರರು ಕಲಾ ಅಧ್ಯಾಪಕರು ಹಾಗೂ ಕಲಾ ಲೇಖಕರು. ಕೇಂದ್ರ ಹಾಗೂ ರಾಜ್ಯ ಲಲಿತಕಲಾ ಅಕಾಡೆಮಿ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ ಕೆ.ಕೆ. ಹೆಬ್ಬಾರ್ ಕರ್ನಾಟಕದ ಕೀತಿಯನ್ನು ಆಗಸದಲ್ಲಿ ಬೆಳಗಿದವರು.

## ಅಂತರಾಷ್ಟ್ರೀಯ ಪ್ರಶಸ್ತಿ ಪುರಸ್ಕೃತರು



### ಯೂಸುಫ್ ಅರಕ್ಕಲ್

**ಬಾಂಗ್ಲಾದೇಶದ 3ನೇ ಏಷ್ಯನ್ ಕಲಾ ಬೈನಾಲೆ ವಿಶೇಷ ಪ್ರಶಸ್ತಿ**

ಕೇರಳದ ಚೌಘಾಟ್‌ನಲ್ಲಿ ಜನಿಸಿದ ಯೂಸುಫ್ ಅರಕ್ಕಲ್ ಚಿತ್ರಕಲೆಯಲ್ಲಿ ಡಿಪ್ಲೋಮಾ ಪಡೆದಿದ್ದು ಬೆಂಗಳೂರಿನ ಚಿತ್ರಕಲಾ ಪರಿಷತ್ತಿನಲ್ಲಿ. ಪ್ರಿಂಟ್ ಮೇಕಿಂಗ್‌ನಲ್ಲಿ ವಿಶೇಷ ಅಧ್ಯಯನ ನಡೆಸಿರುವ ಅರಕ್ಕಲ್ ಅದಕ್ಕಾಗಿ ನವದೆಹಲಿ ಸೇರಿದಂತೆ ಹಲವೆಡೆ ವಿಶೇಷ ಅಭ್ಯಾಸ ಮಾಡಿದ್ದಾರೆ.

ಅನೇಕ ರಾಷ್ಟ್ರೀಯ ಅಂತರಾಷ್ಟ್ರೀಯ ಕಲಾ ಪ್ರದರ್ಶನಗಳಲ್ಲಿ ಪಾಲ್ಗೊಂಡಿರುವ ಯೂಸುಫ್ ಅವರ ಭಿತ್ತಿ ಚಿತ್ರಗಳು ಹಲವು ಪ್ರತಿಷ್ಠಿತ ಸಂಸ್ಥೆಗಳಲ್ಲಿ ಮೂಡಿಬಂದಿವೆ.

ಚಿತ್ರ, ಶಿಲ್ಪ ಹಾಗೂ ಗ್ರಾಫಿಕ್ಸ್ ವಿಭಾಗಗಳಲ್ಲಿ ಹತ್ತಾರು ಪ್ರಶಸ್ತಿಗಳನ್ನು ಗಳಿಸಿರುವ ಇವರಿಗೆ **ಬಾಂಗ್ಲಾದೇಶದ 3ನೇ ಏಷ್ಯನ್ ಕಲಾ ಬೈನಾಲೆ ವಿಶೇಷ ಪ್ರಶಸ್ತಿ**ಯೂ ಲಭಿಸಿದೆ. ರಾಷ್ಟ್ರೀಯ ಹಾಗೂ ರಾಜ್ಯದಲ್ಲಿ ಅನೇಕ ಪ್ರಶಸ್ತಿ ಗೌರವ ಪ್ರಶಸ್ತಿ ಪುರಸ್ಕೃತರು.

# ಅಂತರಾಷ್ಟ್ರೀಯ ಪ್ರಶಸ್ತಿ ಪುರಸ್ಕೃತರು



## ಎನ್. ಪುಷ್ಪಮಾಲಾ

**ಭಾರತ ಟ್ರಿನಾಲೆ ಅಂತರಾಷ್ಟ್ರೀಯ ಪ್ರಶಸ್ತಿ – 1986**

ಕರ್ನಾಟಕ ಲಲಿತಕಲಾ ಅಕಾಡೆಮಿ ಆರಂಭಿಸಿದ ಕಲಾವಿದ್ಯಾರ್ಥಿ ವೇತನ ಯೋಜನೆಯನ್ನು ಉಪಯೋಗಿಸಿಕೊಂಡು ಹೆಸರು ಮಾಡಿದ ಕಲಾವಿದರಲ್ಲಿ ಎನ್. ಪುಷ್ಪಮಾಲಾ ಅವರೂ ಒಬ್ಬರು. ಬೆಂಗಳೂರಿನಲ್ಲಿ ಜನಿಸಿ ಬರೋಡಾ ಸಯ್ಯಾಜಿರಾವ್ ವಿಶ್ವವಿದ್ಯಾನಿಲಯದಿಂದ ಸ್ನಾತಕೋತ್ತರ ಕಲಾ ಪದವಿ ಪಡೆದ ಎನ್. ಪುಷ್ಪಾಮಾಲಾ ದೇಶ ವಿದೇಶಗಳ ಪ್ರತಿಷ್ಠಿತ ಚಿತ್ರಕಲಾ ಪ್ರದರ್ಶನಗಳಲ್ಲಿ ಪಾಲ್ಗೊಂಡಿದ್ದಾರೆ. ಸ್ತ್ರೀವಾದಿ ಚಿಂತನೆಗಳನ್ನು ತಮ್ಮ ಕೃತಿಗಳ ಮೂಲಕ ಸಮರ್ಥವಾಗಿ ಪ್ರತಿಪಾದಿಸುವ ಪುಷ್ಪಮಾಲಾ, ಶಿಲ್ಪಕಲೆ, ಛಾಯಾಚಿತ್ರ ವಿಡಿಯೋ ಹಾಗೂ ಅಭಿನಯ ಪ್ರದರ್ಶನ ಕಲೆಗಳನ್ನು ರೂಢಿಸಿಕೊಂಡವರು. ಪ್ರಪಂಚದ ಪ್ರಸಿದ್ಧ ಕಲಾಸಂಸ್ಥೆಗಳಿಂದ ಅನುದಾನ ಪಡೆದಿರುವ ಪುಷ್ಪಮಾಲಾ ದೇಶ ವಿದೇಶಗಳ ಪ್ರಮುಖ ಗ್ಯಾಲರಿಗಳಲ್ಲಿ ತಮ್ಮ ಚಿತ್ರ ಪ್ರದರ್ಶನಗಳನ್ನು ಏರ್ಪಡಿಸಿದವರು. ಬರೋಡಾದಲ್ಲಿ ಎಂ.ಎ. ವ್ಯಾಸಂಗ ಮಾಡುತ್ತಿರುವಾಗಲೇ ತಮ್ಮ ಟೆರ್ರಾಕೋಟ ಶಿಲ್ಪ ರಚನೆಗೆ ರಾಷ್ಟ್ರಪ್ರಶಸ್ತಿ ಗಳಿಸಿದ ಎನ್. ಪುಷ್ಪಮಾಲಾ **1986 ಟ್ರಿನಾಲೆ ಅಂತರಾಷ್ಟ್ರೀಯ ಪ್ರದರ್ಶನದಲ್ಲಿ ತಮ್ಮ ಶಿಲ್ಪಕ್ಕೆ ಚಿನ್ನದ ಪದಕ ಪಡೆದರು**. ರಾಜ್ಯೋತ್ಸವ – ಶಿಲ್ಪಕಲಾ ಅಕಾಡೆಮಿ ಪ್ರಶಸ್ತಿ ಸೇರಿದಂತೆ ಹಲವು ಗೌರವ–ಪುರಸ್ಕಾರಗಳಿಗೆ ಎನ್. ಪುಷ್ಪಮಾಲಾ ಅವರು ಪಾತ್ರರು.



## ಡಾ.ಎಂ.ಎಸ್. ಮೂರ್ತಿ

**ಇರಾನ್ ಅಕಾಡೆಮಿ ಆಫ್ ಆರ್ಟ್‌ನ ಅಂತಾರಾಷ್ಟ್ರೀಯ ಬೈನಾಲೆ ಪ್ರಶಸ್ತಿ**

ಸಂವೇದನಾಶೀಲ ಕಲಾವಿದರೆಂದೇ ಗುರುತಿಸಲ್ಪಡುವ ಡಾ.ಎಂ.ಎಸ್.ಮೂರ್ತಿ ಅವರು ಬೆಂಗಳೂರಿನಲ್ಲಿ 1950ರಲ್ಲಿ ಹುಟ್ಟಿದವರು. ಐದು ವರ್ಷಗಳ ಕಲಾಶಿಕ್ಷಣವನ್ನು ಪೂರೈಸಿದ ಬಳಿಕ ಪೂರ್ಣಾವಧಿ ಕಲಾವಿದರಾಗಿ ಕಲಾಕೃತಿಗಳ ರಚನೆಯಲ್ಲಿ ತೊಡಗಿಕೊಂಡವರು. ನಿಯತಕಾಲಿಕೆ, ಸಾಹಿತ್ಯ ಕೃತಿಗಳಿಗೆ ಮುಖಪುಟ ಚಿತ್ರ ರಚನೆಗೆ ಹೆಸರಾದವರು. ಸಾಹಿತ್ಯ ಮತ್ತು ಕಲೆ ಅವರ ಸಮಾನ ಆಸಕ್ತಿಗಳು. 'ಮಕ್ಕಳ ಮನಸ್ಸಿನ ಚಿತ್ರಗಳು' ಮಹಾಪ್ರಬಂಧಕ್ಕೆ ಹಂಪಿ ವಿಶ್ವವಿದ್ಯಾಲಯದಿಂದ ಡಾಕ್ಟರೇಟ್ ಪಡೆದವರು. ಮೂರ್ತಿ ಅವರ 'ಬುದ್ಧನೆಂಬ ಬೆಳಕು' (ಬುದ್ಧ ದಿ ಲೈಟ್) ಕೃತಿಗೆ ಇರಾನ್ ದೇಶದ ಅಕಾಡೆಮಿ ಆಫ್ ಆರ್ಟ್ಸ್‌ನ 'ಅಂತರಾಷ್ಟ್ರೀಯ ಬೈನಾಲೆ ಪ್ರಶಸ್ತಿ' ಯ ಗೌರವ ಸಂದಿದೆ. ಅವರ ಸಾಹಿತ್ಯ ಗ್ರಂಥ 'ದೇಸಿ ನಗು' ಪ್ರಬಂಧ ಸಂಕಲನಕ್ಕೆ 2006ರ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಯಶೋಧರೆ ಮಲಗಿರಲಿಲ್ಲ' ಎಂಬ ನಾಟಕಕ್ಕೆ ಆಕಾಶವಾಣಿ ರಾಷ್ಟ್ರೀಯ ಉತ್ಸವ ನಾಟಕ ಪ್ರಶಸ್ತಿ ಬಂದಿದೆ. 'ದೃಶ್ಯ' ಕಲಾಲೋಕದ ಮೊದಲ ಕಾದಂಬರಿಯಾಗಿದ್ದು ಕರ್ನಾಟಕ ಪುಸ್ತಕ ಪ್ರಾಧಿಕಾರದ 'ಪುಸ್ತಕ ಸೊಗಸು' ಗೌರವಕ್ಕೆ ಪಾತ್ರವಾಗಿದೆ. 2016ರಲ್ಲಿ ದಸರಾ ಕಲಾಪುರಸ್ಕಾರ, ಶ್ರೀ ಡಿ.ವಿ. ಹಾಲಭಾವಿ ರಾಷ್ಟ್ರೀಯ ಪ್ರಶಸ್ತಿ ಪುರಸ್ಕೃತರು. ಕರ್ನಾಟಕ ಲಲಿತಕಲಾ ಅಕಾಡೆಮಿಯ ಅಧ್ಯಕ್ಷರಾಗಿ ಸಾರ್ಥಕ ಸೇವೆಗೈದಿರುವ ಮೂರ್ತಿ ಅವರ ಕಲಾಕೃತಿಗಳು ದೆಹಲಿಯ ಪ್ರತಿಷ್ಠಿತ ನ್ಯಾಷನಲ್ ಗ್ಯಾಲರಿ ಆಫ್ ಮಾಡರ್ನ್ ಆರ್ಟ್ ಸೇರಿದಂತೆ ರಾಷ್ಟ್ರ–ಅಂತರಾಷ್ಟ್ರೀಯ ಗ್ಯಾಲರಿಗಳ ಕಲಾಸಂಗ್ರಹದಲ್ಲಿರುವುದು ವಿಶೇಷ.



## ಸಿ.ಎಫ್. ಜಾನ್

**C.F. John is the awardee of the Arad International Biennale of Art,Romania (2005)**

ಮಾನವೀಯ ಸಂಬಂಧಗಳೊಂದಿಗೆ ಕಲೆಯನ್ನು ಬೆಸೆಯುವ ಕಲಾವಿದ ಸಿ.ಎಫ್. ಜಾನ್ ಜನಮುಖಿ ಹೋರಾಟಗಳೊಂದಿಗೆ ಒಡನಾಟವಿಟ್ಟುಕೊಂಡವರು.
ದೇಶ ವಿದೇಶಗಳ ಹಲವಾರು ಗ್ಯಾಲರಿಗಳಲ್ಲಿ ಪ್ರದರ್ಶನ ಏರ್ಪಡಿಸಿರುವ ಜಾನ್ ಅವರ ಕೃತಿಗಳು ಅನೇಕ ಪ್ರತಿಷ್ಠಿತ ಸಂಘ ಸಂಸ್ಥೆಗಳ ಸಂಗ್ರಹಗಳಲ್ಲಿವೆ. ಕುಂಚದಿಂದ ಮೂಡಿಸುವ ಕಲೆಯೊಂದಿಗೆ ನಿಸರ್ಗದೊಂದಿಗೆ ಪಡಿಮೂಡುವಂತೆ ಬೃಹತ್ ಕಲಾ ರಚನೆ ಮಾಡುವಲ್ಲಿಯೂ ಸಿ.ಎಫ್. ಜಾನ್ ಮುಂದು. ತಮ್ಮ ಗೆಳೆಯರೊಂದಿಗೆ ಕೇರಳದ ಸಮುದ್ರ ತೀರದಲ್ಲಿ ಮೀನುಗಾರರ ವಾಸಸ್ಥಳದ ಜೊತೆಗೆ ಬೃಹತ್ ಕಲಾರಚನೆ ಇದಕ್ಕೊಂದು ಉದಾಹರಣೆ. ನರ್ಮದ ನದಿ ರಕ್ಷಣೆ, ಕಾರ್ಗಿಲ್ ಹೋರಾಟ ಮುಂತಾದ ಸಂಗತಿಗಳೊಂದಿಗೆ ಅಧ್ಯಾತ್ಮವನ್ನು ಒಟ್ಟುಗೂಡಿಸುವ ಸಿ.ಎಫ್. ಜಾನ್ ಬೇಸಾಯ ಬದುಕಿನಲ್ಲಿ ಸೇರಿದವರು. ಕಲೆಯನ್ನು ನೈಜನೆಲೆಯಲ್ಲೂ ಸೃಜಿಸುವ ನಿಪುಣ ಸಿ.ಎಫ್. ಜಾನ್ ಜಗತ್ತಿನ ತವಕ ತಲ್ಲಣಗಳೊಂದಿಗೆ ತಮ್ಮ ಕಲೆಯೊಂದಿಗೆ ತೆರೆದುಕೊಂಡ ಕಲಾವಿದ.

## ವರ್ಣಶಿಲ್ಪಿ ವೆಂಕಟಪ್ಪ ಪ್ರಶಸ್ತಿ ಪುರಸ್ಕೃತರು

ನಾಡಿನ ಚಿತ್ರಕಲೆಯನ್ನು ವಿಖ್ಯಾತಗೊಳಿಸಿದ ಶ್ರೇಷ್ಠ ಚಿತ್ರಕಲಾವಿದರ ನಾಡಿದು. ಈ ಕ್ಷೇತ್ರದ ಹಿರಿಯ ಕಲಾವಿದರನ್ನು ಪುರಸ್ಕರಿಸುವ ಉದ್ದೇಶದಿಂದ ಕನ್ನಡ ನಾಡಿನ ಹೆಮ್ಮೆಯ ಕಲಾವಿದ ದಿ. ವರ್ಣಶಿಲ್ಪಿ ವೆಂಕಟಪ್ಪನವರ ಹೆಸರಿನಲ್ಲಿ 1993ರಿಂದ ಸ್ಥಾಪಿತವಾಗಿದ್ದೇ 'ವರ್ಣಶಿಲ್ಪಿ ವೆಂಕಟಪ್ಪ ಪ್ರಶಸ್ತಿ'. ಪ್ರಶಸ್ತಿಯು ಪ್ರಶಸ್ತಿ ಪುತ್ಥಳಿ, ಫಲಕ, ಶಾಲು, ಹಾರ ಹಾಗೂ ನಗದನ್ನು ಒಳಗೊಂಡಿರುತ್ತದೆ. ಇದುವರೆವಿಗೆ 23 ಸಾಧಕರು ಈ ಪ್ರಶಸ್ತಿಗೆ ಭಾಜನರಾಗಿದ್ದಾರೆ. 1994ರಿಂದ 2016ರವರೆಗೆ ಅನುಕ್ರಮವಾಗಿ ವೆಂಕಟಪ್ಪ ಪ್ರಶಸ್ತಿಗೆ ಭಾಜನರಾದ ಸಾಧಕರ ಕಿರು ಪರಿಚಯ.



### ಕೆ.ಕೆ. ಹೆಬ್ಬಾರ್ – 1994

ಮೈಸೂರು ಚಾಮರಾಜೇಂದ್ರ ಕಲಾಶಾಲೆ, ಮುಂಬೈನ ನೂತನ ಕಲಾಶಾಲೆ ಹಾಗೂ ಜೆ.ಜೆ. ಕಲಾ ಶಾಲೆಗಳಲ್ಲಿ ಅಭ್ಯಾಸ ಮಾಡಿ ಪದವಿ ಗಳಿಸಿದ ಕೆ.ಕೆ. ಹೆಬ್ಬಾರ್ ಹೆಚ್ಚಿನ ವ್ಯಾಸಂಗ ಮಾಡಿದ್ದು ಇಂಗ್ಲೆಂಡ್ ಹಾಗೂ ಪ್ಯಾರಿಸ್‌ಗಳಲ್ಲಿ.
ಕೇಂದ್ರ ಹಾಗೂ ರಾಜ್ಯ ಲಲಿತಕಲಾ ಅಕಾಡೆಮಿ ಅಧ್ಯಕ್ಷಗಿದ್ದ ಹೆಬ್ಬಾರ್ ಜಗತ್ತಿನಾದ್ಯಂತ ತಮ್ಮ ಕೃತಿಗಳನ್ನು ಪ್ರದರ್ಶಿಸಿದ್ದು ಅನೇಕ ಕೃತಿಗಳನ್ನು ಪ್ರಕಟಿಸಿದ್ದಾರೆ. ಮೈಸೂರು ವಿಶ್ವವಿದ್ಯಾನಿಲಯದಿಂದ ಗೌರವ ಡಾಕ್ಟರೇಟ್ ಪಡೆದಿರುವ ಹೆಗ್ಗಳಿಕೆ ಕೆ.ಕೆ. ಹೆಬ್ಬಾರ್ ಅವರದು.



### ಡಿ.ವಿ. ಹಾಲಭಾವಿ – 1995

ಧಾರವಾಡದವರಾದ ಡಿ.ವಿ. ಹಾಲಭಾವಿ ಅವರು ಮುಂಬೈನ ಜೆ.ಜೆ. ಶಾಲೆಯಿಂದ ಲಲಿತಕಲೆಯಲ್ಲಿ ಡಿಪ್ಲೋಮಾ ಪಡೆದವರು. ಧಾರವಾಡದ ಕಲಾಶಾಲೆಯ ಸಂಸ್ಥಾಪಕ ಪ್ರಿನ್ಸಿಪಾಲ ಹಾಗೂ ನಿರ್ದೇಶಕರಾದ ಡಿ.ವಿ. ಹಾಲಭಾವಿ ಪುಣೆ, ಔರಂಗಾಬಾದ್, ಮುಂಬೈ, ಗೋಕಾಕ್ ಹೀಗೆ ದೇಶದುದ್ದಕ್ಕೂ ಹಲವಾರು ಪ್ರದರ್ಶನಗಳನ್ನು ಏರ್ಪಡಿಸಿದವರು.
ದೇಶ ವಿದೇಶಗಳ ಹಲವು ಸಂಘ ಸಂಸ್ಥೆಗಳ ಸಂಗ್ರಹದಲ್ಲಿ ಡಿ.ವಿ. ಹಾಲಭಾವಿ ಅವರ ಚಿತ್ರಕೃತಿಗಳದ್ದು ಇವರು ಕಲೆ ಕುರಿತ ಅನೇಕ ಕೃತಿಗಳನ್ನು ರಚಿಸಿದ್ದಾರೆ. ಕಲಾಶಿಕ್ಷಣಕ್ಕೆ ಸಂಬಂಧಿಸಿದ ಸಮಿತಿಗಳಲ್ಲಿ ಕೆಲಸ ಮಾಡಿರುವ ಹಾಲಬಾವಿ ಅವರಿಗೆ ಸಂದಿರುವ ಪ್ರಶಸ್ತಿ–ಪುರಸ್ಕಾರಗಳು ಹತ್ತು ಹಲವು.



### ಎಂ.ಎ. ಚೆಟ್ಟಿ – 1996

ಚಿತ್ರಕಲೆಯಲ್ಲಿ ಸ್ನಾತಕೋತ್ತರ ಪದವಿ ಪಡೆದಿರುವ ಎಂ.ಎ. ಚೆಟ್ಟಿ ಅವರು ಅನೇಕ ಏಕವ್ಯಕ್ತಿ ಪ್ರದರ್ಶನಗಳಲ್ಲಿ ಹಾಗೂ ಗುಂಪು ಪ್ರದರ್ಶನಗಳಲ್ಲಿ ಭಾಗವಹಿಸಿದ್ದಾರೆ.
ಗದಗ, ಬೆಳಗಾವಿ, ಬಿಜಾಪುರ, ಗೋವಾ ಮೊದಲಾದೆಡೆ ಹಲವು ಪ್ರದರ್ಶನಗಳನ್ನು ಏರ್ಪಡಿಸಿರುವ ಇವರಿಗೆ ಕರ್ನಾಟಕ ಲಲಿತಕಲಾ ಅಕಾಡೆಮಿ ಗೌರವವೂ ಸೇರಿದಂತೆ ಹಲವು ಪುರಸ್ಕಾರಗಳು ಲಭಿಸಿವೆ.

# ವರ್ಣಶಿಲ್ಪಿ ವೆಂಕಟಪ್ಪ ಪ್ರಶಸ್ತಿ ಪುರಸ್ಕೃತರು



## ಪಿ.ಆರ್. ತಿಪ್ಪೇಸ್ವಾಮಿ - 1997

ಚಿತ್ರದುರ್ಗ ಜಿಲ್ಲೆ ಹರ್ತಿಕೋಟೆಯವರಾದ ಪಿ.ಆರ್. ತಿಪ್ಪೇಸ್ವಾಮಿ ಮೈಸೂರಿನ ಚಾಮರಾಜೇಂದ್ರ ಕಲಾಶಾಲೆಯಿಂದ ಕಲಾಶಿಕ್ಷಣ ಪಡೆದವರು. ನಾಡಿನುದ್ದಕ್ಕೂ ಹಲವು ಕಲಾಪ್ರದರ್ಶನಗಳನ್ನು ನಡೆಸಿದ ಪಿ.ಆರ್. ತಿಪ್ಪೇಸ್ವಾಮಿ ರಾಜ್ಯದಲ್ಲಿ ಪ್ರತಿಷ್ಠಿತ ಜಾನಪದ ಸಂಗ್ರಹಾಲಯಗಳನ್ನು ರೂಪಿಸಿಕೊಟ್ಟವರು.

ಮೈಸೂರಿನ ಚಿತ್ರ ಶಿಲ್ಪ ಅಕಾಡೆಮಿ ಸ್ಥಾಪಕರಲ್ಲೊಬ್ಬರಾದ ಪಿ.ಆರ್. ತಿಪ್ಪೇಸ್ವಾಮಿ ಪ್ರಕೃತಿ ಚಿತ್ರಣದಲ್ಲಿ ಪರಿಣಿತರು. ಕಲೆಗೆ ಸಂಬಂಧಿಸಿದ ಹಲವು ಕೃತಿಗಳನ್ನು ರಚಿಸಿರುವ ಇವರು ರಾಷ್ಟ್ರ ಮತ್ತು ರಾಜ್ಯಮಟ್ಟದ ಹಲವು ಗೌರವಗಳನ್ನು ಗಳಿಸಿದವರು.



## ಆರ್.ಎಂ. ಹಡಪದ್ - 1998

ಕಲೆಯ ಗಣಿ ಎನಿಸಿರುವ ಬಾದಾಮಿಯಲ್ಲಿ ಜನಿಸಿದ ಆರ್.ಎಂ. ಹಡಪದ್ ಮುಂಬೈನ ಜೆ.ಜೆ. ಕಲಾಶಾಲೆಯಿಂದ ಜಿ.ಡಿ. ಆರ್ಟ್ಸ್, ಆರ್ಟ್ಸ್ ಮಾಸ್ಟರ್ ಕಲಿಕೆ ಮಾಡಿ ನಂತರ ಬೆಂಗಳೂರಿನಲ್ಲಿ ಕೆನ್ ಶಾಲೆಯನ್ನು ಸ್ಥಾಪಿಸಿದರು.

ರಾಜಾಸ್ತಾನದ ದೇಶಿ ಭಿತ್ತಿ ಚಿತ್ರಕಲಾ ಕೌಶಲ್ಯವನ್ನು ಅರಿತ ಹಡಪದರು ರಾಷ್ಟ್ರ ಹಾಗೂ ರಾಜ್ಯಮಟ್ಟದಲ್ಲಿ ಅನೇಕ ಪ್ರದರ್ಶನಗಳನ್ನು ನಡೆಸಿದರು. ಕರ್ನಾಟಕ ಲಲಿತಕಲಾ ಅಕಾಡೆಮಿ ಅಧ್ಯಕ್ಷರಾಗಿದ್ದ ಆರ್.ಎಂ. ಹಡಪದರು ಲಲಿತಕಲಾ ಅಕಾಡೆಮಿ ಗೌರವ ಪುರಸ್ಕೃತರು. ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ ನಾಡೋಜ ಗೌರವಕ್ಕೆ ಪಾತ್ರರಾದವರು.



## ಎಂ.ಜೆ. ಶುದ್ಧೋದನ - 1999

ಚಾಮರಾಜೇಂದ್ರ ಕಲಾಶಾಲೆ ಹಾಗೂ ಮದ್ರಾಸ್ ಕಲಾ ಶಾಲೆಗಳಲ್ಲಿ ಕಲಿತ ಮೈಸೂರಿನ ಎಂ.ಜೆ. ಶುದ್ಧೋದನ ಚಿತ್ರಕಲೆ ಹಾಗೂ ಪೇಂಟಿಂಗ್‌ಗಳಲ್ಲಿ ಪರಿಣಿತ ಕಲಾವಿದರು.

ಇವರ ಕೃತಿಗಳು ರಾಷ್ಟ್ರಪತಿ ಭವನ, ವಿಧಾನಸೌಧ ರಾಜಭವನ, ಶಿಲ್ಲಾಂಗ್, ಕಾಫಿಬೋರ್ಡ್ ಕಚೇರಿ, ಇಂದಿರಾಗಾಂಧಿ ಟ್ರಸ್ಟ್ ಮೊದಲಾದ ಸಂಗ್ರಹಗಳಲ್ಲಿರುವುದು ಹೆಗ್ಗಳಿಕೆ.

ರಾಜ್ಯ ಹಾಗೂ ರಾಜ್ಯದ ಹೊರಗೆ ಹಲವಾರು ಏಕವ್ಯಕ್ತಿ ಪ್ರದರ್ಶನಗಳನ್ನು ಏರ್ಪಡಿಸಿದ್ದ ಎಂ.ಜೆ. ಶುದ್ಧೋದನ ಲಲಿತಕಲಾ ಅಕಾಡೆಮಿ, ದಸರಾ ಹಾಗೂ ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತರು.

## ವರ್ಣಶಿಲ್ಪಿ ವೆಂಕಟಪ್ಪ ಪ್ರಶಸ್ತಿ ಪುರಸ್ಕೃತರು



### ಎಂ.ಎಸ್. ಚಂದ್ರಶೇಖರ್ - 2000

ಮೈಸೂರಿನಲ್ಲಿ ಜನಿಸಿದ ಎಂ.ಎಸ್. ಚಂದ್ರಶೇಖರ್ ಪದವಿ ಗಳಿಸಿದ್ದು ಮೈಸೂರಿನ ಜಯಚಾಮರಾಜೇಂದ್ರ ಕಲಾ ಶಾಲೆಯಿಂದ. ಕೇಂದ್ರ ಪುರಾತತ್ವ ಇಲಾಖೆಗೆ ಕಲಾವಿದರಾಗಿ ಸೇರುವ ಮೊದಲು ಹಲವು ಪ್ರಯೋಗಗಳನ್ನು ಅವರು ಕೈಗೊಂಡರು.
ಪ್ರಖ್ಯಾತ 'ಅಜಂತ' ಗುಹೆಯಲ್ಲಿ ಹಲವಾರು ಪ್ರತಿಕೃತಿಗಳನ್ನು ರಚಿಸಿದ ಎಂ.ಎಸ್. ಚಂದ್ರಶೇಖರ್ ಕರ್ನಾಟಕದ ಬಾದಾಮಿ ಗುಹೆಗಳ ಪ್ರತಿಕೃತಿಗಳನ್ನು ರಚಿಸಿದ್ದಾರೆ. ನಿಸರ್ಗ ಚಿತ್ರಣದಲ್ಲಿ ಹೆಗ್ಗಳಿಕೆ ಪಡೆದಿರುವ ಇವರು ರಾಜ್ಯ ಲಲಿತಕಲಾ ಅಕಾಡೆಮಿಯ ಗೌರವ ಪ್ರಶಸ್ತಿ ಪುರಸ್ಕೃತರು.



### ಎಸ್.ಎಸ್. ಮುನೋಳಿ - 2001

ಗುಲ್ಬರ್ಗಾದವರಾದ ಶಿವ ಎಸ್. ಮುನೋಳಿ ಬರೋಡ ವಿಶ್ವವಿದ್ಯಾನಿಲಯದಿಂದ ಲಲಿತಕಲೆಯಲ್ಲಿ ಪದವಿ ಪಡೆದವರು.
ಪ್ಯಾರೀಸ್, ಬ್ರುಸೆಲ್ಸ್. ಹೇಗ್ ಕೊಪನ್ ಹೇಗನ್ ಮೊದಲಾದ ಕಡೆಗಳಲ್ಲಿ ಪ್ರದರ್ಶನ ನಡೆಸಿರುವ ಎಸ್.ಎಸ್. ಮುನೋಳಿ ಗುಜರಾತ್, ಆಂಧ್ರಕಲಾ ಅಕಾಡೆಮಿ ಪ್ರಶಸ್ತಿಗಳಗೂ ಸೇರಿದಂತೆ ಹಲವು ಗೌರವ-ಪುರಸ್ಕಾರಗಳನ್ನು ಗಳಿಸಿದವರು. ಕರ್ನಾಟಕದ ಕಲಾ ಲೋಕದಲ್ಲಿ ಹೊಸ ಸಂಚಲನ ಮೂಡಿಸಿದ ನಾವು ನಾಲ್ವರು ಪ್ರದರ್ಶನದ ಸಂಸ್ಥಾಪಕ ಸದಸ್ಯರಲ್ಲೊಬ್ಬರು ಎಸ್.ಎಸ್. ಮುನೋಳಿ ಅವರು.



### ಜೆ.ಎಸ್. ಖಂಡೇರಾವ್ - 2002

ಗುಲ್ಬರ್ಗಾದಲ್ಲಿ ಜನಿಸಿದ ಜೆ.ಎಸ್. ಖಂಡೇರಾವ್ ಮುಂಬೈನ ಜೆ.ಜೆ. ಕಲಾಶಾಲೆಯಲ್ಲಿ ಡಿಪ್ಲೋಮಾ ಪಡೆದಿದ್ದು. ಇವರು ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಪದವೀಧರರು.
ಗುಲ್ಬರ್ಗಾ ಐಡಿಯಲ್ ಫೈನ್ ಆರ್ಟ್ಸ್ ಸೊಸೈಟಿ ಆರಂಭಿಸಿ ಅದರ ಆರಂಭಿಕ ಪ್ರಾಂಶುಪಾಲರಾಗಿದ್ದ ಜೆ.ಎಸ್. ಖಂಡೇರಾವ್ ಅವರ ಕಲಾಕೃತಿಗಳು ರಾಜ್ಯ ಹಾಗೂ ರಾಷ್ಟ್ರದ ಹಲವೆಡೆ ಪ್ರದರ್ಶನಗೊಂಡಿವೆ. ಕನ್ನಡ ವಿಶ್ವವಿದ್ಯಾನಿಲಯದಿಂದ ನಾಡೋಜ ಗೌರವಕ್ಕೆ ಪಾತ್ರರಾಗಿರುವ ಇವರು ಕರ್ನಾಟಕ ಲಲಿತಕಲಾ ಅಕಾಡೆಮಿ ಅಧ್ಯಕ್ಷರಾಗಿದ್ದವರು. ಹಲವು ಗೌರವ-ಪುರಸ್ಕಾರಗಳ ಪುರಸ್ಕೃತರು.

# ವರ್ಣಶಿಲ್ಪಿ ವೆಂಕಟಪ್ಪ ಪ್ರಶಸ್ತಿ ಪುರಸ್ಕೃತರು



## ಎಸ್.ಜಿ. ವಾಸುದೇವ್ - 2003

ಮೈಸೂರಿನಲ್ಲಿ ಜನಿಸಿದ ಎಸ್.ಜಿ. ವಾಸುದೇವ್ ಚಿತ್ರಕಲೆಯಲ್ಲಿ ಡಿಪ್ಲೋಮಾ ಪಡೆದದ್ದು ಮದ್ರಾಸ್‌ನ ಸರ್ಕಾರಿ ಕರಕುಶಲ ಹಾಗೂ ಕಲಾ ಕಾಲೇಜಿನಿಂದ. ಮದ್ರಾಸ್‌ನ ಚೋಳಮಂಡಲ ಕಲಾಗ್ರಾಮದ ಸಂಸ್ಥಾಪಕರಲ್ಲಿ ಒಬ್ಬರಾದ ವಾಸುದೇವ್ ಅವರ ಕೃತಿಗಳು ದೇಶ ವಿದೇಶಗಳಲ್ಲಿ ಪ್ರದರ್ಶನಗೊಂಡಿವೆ.

ಕೇಂದ್ರ-ರಾಜ್ಯ ಲಲಿತಕಲಾ ಅಕಾಡೆಮಿ ಪ್ರಶಸ್ತಿಗಳೂ ಸೇರಿದಂತೆ ಹಲವು ಗೌರವಗಳನ್ನು ಪಡೆದಿರುವ ಎಸ್.ಜಿ. ವಾಸುದೇವ್ ಕರ್ನಾಟಕ ಕಲಾಮೇಳ ಸ್ಥಾಪಕರಲ್ಲೊಬ್ಬರು. ಪ್ರಸಿದ್ಧ 'ಸಂಸ್ಕಾರ' ಚಲನಚಿತ್ರದ ಕಲಾ ನಿರ್ದೇಶಕರಾಗಿದ್ದ ಇವರು ದೇಶದ ಹೆಸರಾಂತ ಕಲಾವಿದರಲ್ಲೊಬ್ಬರು.



## ಯುಸುಫ್ ಅರಕ್ಕಲ್ - 2004

ದೇಶದ ಹೆಸರಾಂತ ಕಲಾವಿದರಲ್ಲೊಬ್ಬರಾದ ಯುಸುಫ್ ಅರಕ್ಕಲ್ ಚಿತ್ರಕಲೆಯ ಡಿಪ್ಲೋಮಾ ಪಡೆದಿದ್ದು ಬೆಂಗಳೂರಿನ ಚಿತ್ರಕಲಾ ಪರಿಷತ್ತಿನಲ್ಲಿ. ಚಿತ್ರಕಲೆ ಹಾಗೂ ಶಿಲ್ಪಕಲೆಯಲ್ಲೂ ಪರಿಣಿತಿ ಸಾಧಿಸಿದ ಯುಸುಫ್ ರಷ್ಯಾ, ಬಾಂಗ್ಲಾ, ಜಪಾನ್ ಮೊದಲಾದ ದೇಶಗಳಲ್ಲಿ ಕಲಾ ಪ್ರದರ್ಶನಗಳನ್ನು ಏರ್ಪಡಿಸಿದವರು. ಹೊಸ ತಂತ್ರಗಳನ್ನು ಅಳವಡಿಸುವಲ್ಲಿ ಹೆಚ್ಚಿನ ಆಸಕ್ತಿ ತೋರಿದ ಯುಸುಫ್ ಅರಕ್ಕಲ್ ಕರ್ನಾಟಕ ಲಲಿತಕಲಾ ಅಕಾಡೆಮಿಯ ಗೌರವ ಪ್ರಶಸ್ತಿಯೂ ಸೇರಿದಂತೆ ಹಲವು ಗೌರವ-ಪುರಸ್ಕಾರಗಳನ್ನು ಪಡೆದವರು.



## ವಿಜಯ ಸಿಂಧೂರ - 2005

ಬಿಜಾಪುರದ ಜಮಖಂಡಿಯಲ್ಲಿ ಹುಟ್ಟಿದ ವಿಜಯ ಸಿಂಧೂರ ಜಿ.ಡಿ. ಆರ್ಟ್ಸ್ ಮತ್ತು ಭಿತ್ತಿ ಚಿತ್ರಕಲೆಯಲ್ಲಿ ಡಿಪ್ಲೋಮಾ ಪಡೆದುಕೊಂಡಿದ್ದು ಮುಂಬಯಿನ ಜೆ.ಜೆ. ಕಲಾಶಾಲೆಯಲ್ಲಿ. ದೇಶದ ಹಲವು ಕಡೆ ಕಲಾ ಪ್ರದರ್ಶನ ನಡೆಸಿರುವ ವಿಜಯ ಸಿಂಧೂರ ಗಳಿಸಿರುವ ಪ್ರಶಸ್ತಿ-ಪುರಸ್ಕಾರಗಳು ಹಲವಾರು.

ವಿಜಯ ಸಿಂಧೂರ ಮುಂಬೈನ ಇಂಡಿಯನ್ ಆರ್ಟ್ಸ್ ಸೊಸೈಟಿ ಹಾಗೂ ಕರ್ನಾಟಕ ಲಲಿತಕಲಾ ಅಕಾಡೆಮಿ ಗೌರವ ಪ್ರಶಸ್ತಿ ಪುರಸ್ಕೃತರು.

## ವರ್ಣಶಿಲ್ಪಿ ವೆಂಕಟಪ್ಪ ಪ್ರಶಸ್ತಿ ಪುರಸ್ಕೃತರು



### ಬಿ.ಕೆ. ಹುಬ್ಳಿ - 2006

ಬೆಳಗಾವಿಯವರಾದ ಬಿ.ಕೆ. ಹುಬ್ಳಿ ಮುಂಬಯಿನ ಜೆ.ಜೆ. ಕಲಾಶಾಲೆಯಲ್ಲಿ ಡಿ.ಟಿ.ಸಿ, ಜೆ.ಡಿ. ಹಾಗೂ ಆರ್ಟ್ಸ್ ಮಾಸ್ಟರ್ ವ್ಯಾಸಂಗ ಮಾಡಿದರು.
ಕಲಾಶಿಕ್ಷಕ ವೃತ್ತಿಯನ್ನು ಆಯ್ದುಕೊಂಡ ಬಿ.ಕೆ. ಹುಬ್ಳಿ ಅವರು ಅನೇಕ ಮಾಧ್ಯಮಿಕ ಹಾಗೂ ಪ್ರೌಢಶಾಲೆಗಳಲ್ಲಿ ಮಕ್ಕಳಿಗೆ ಕಲಾಶಿಕ್ಷಣ ನೀಡಿದರು. ಇವರ ಏಕವ್ಯಕ್ತಿ ಚಿತ್ರಪ್ರದರ್ಶನಗಳು ದೇಶದುದ್ದಕ್ಕೂ ಏರ್ಪಟ್ಟಿವೆ.
ಪ್ರಕೃತಿ ಚಿತ್ರಣದಲ್ಲಿ ನಿಪುಣರಾದ ಬಿ.ಕೆ. ಹುಬ್ಳಿ ಅವರು ಕರ್ನಾಟಕ ರಾಜ್ಯೋತ್ಸವ, ಕರ್ನಾಟಕ ಕಲಾ ಅಕಾಡೆಮಿ ಪ್ರಶಸ್ತಿ ಮತ್ತಿತರ ಗೌರವಗಳಿಗೆ ಪಾತ್ರರು.



### ಶಂಕರಗೌಡ ಬೆಟ್ಟದೂರ - 2007

ಕೊಪ್ಪಳದ ಬೆಟ್ಟದೂರದಲ್ಲಿ ಜನಿಸಿದ ಶಂಕರಗೌಡ ಬೆಟ್ಟದೂರ ಪ್ರತಿಷ್ಠಿತ ಶಾಂತಿನಿಕೇತನ ಕಲಾಭವನದಿಂದ ಕಲೆಯಲ್ಲಿ ಡಿಪ್ಲೋಮಾ ಗಳಿಸಿದರು.
ಸ್ವಾತಂತ್ರ್ಯ ಹೋರಾಟದಲ್ಲೂ ಪಾಲ್ಗೊಂಡಿದ್ದ ಶಂಕರಗೌಡರು ನವದೆಹಲಿಯ ಬಿರ್ಲಾ ಭವನದಲ್ಲಿ ಬಾಪು ಬಗೆಗೆ ಭಿತ್ತಿಚಿತ್ರವನ್ನು ರಚಿಸಿದವರಲ್ಲದೆ 1954ರಲ್ಲಿ ಕಲ್ಕತ್ತಾದಲ್ಲಿ ನಡೆದ ಕಲಾಪ್ರದರ್ಶನದಲ್ಲಿ ಭಾಗವಹಿಸಿದ್ದರು.
ರಾಷ್ಟ್ರೀಯ ಕಲಾ ಸಂಗ್ರಹಾಲಯಕ್ಕಾಗಿ ಚೀನಾ ದೇಶದ ಭಿತ್ತಿಚಿತ್ರಗಳ ಪ್ರತಿಕೃತಿ ಮಾಡಿಕೊಟ್ಟ ಶಂಕರಗೌಡ ಬೆಟ್ಟದೂರ ರಾಜ್ಯೋತ್ಸವ ಸೇರಿದಂತೆ ಹಲವು ಗೌರವ-ಪ್ರಶಸ್ತಿ ಪುರಸ್ಕೃತರು.



### ಎಂ.ಬಿ. ಪಾಟೀಲ್ - 2008

ಬಿಜಾಪುರದ ತಿಕೋಟದವರಾದ ಎಂ.ಬಿ. ಪಾಟೀಲ್ ಕಲೆಯ ವ್ಯಾಸಂಗ ಮಾಡಿದ್ದು ಮುಂಬಯಿನ ನೂತನ ಕಲಾಮಂದಿರದಲ್ಲಿ. ಕರ್ನಾಟಕ ವಾರ್ತಾ ಇಲಾಖೆಯಲ್ಲಿ ಕಲಾವಿದರಾಗಿ ಕೆಲಸ ಮಾಡಿದ ಪಾಟೀಲರು ಅನೇಕ ಏಕವ್ಯಕ್ತಿ ಸಾಮೂಹಿಕ ಪ್ರದರ್ಶನಗಳಲ್ಲಿ ಭಾಗವಹಿಸಿದ್ದು ಹಲವಾರು ಕಲಾಶಿಬಿರಗಳಿಗೆ ನಿರ್ದೇಶಕರಾಗಿ ಕಾರ್ಯನಿರ್ವಹಿಸಿರುವರು.
ಭಾವಚಿತ್ರ ರಚನೆ ಹಾಗೂ ಪ್ರಾತ್ಯಕ್ಷಿಕೆಯಲ್ಲಿ ಪರಿಣಿತರಾದ ಎಂ.ಬಿ. ಪಾಟೀಲ್ ಹತ್ತಾರು ಕಲಾ ಸಂಘ-ಸಂಸ್ಥೆಗಳೊಂದಿಗೆ ಒಡನಾಟವಿಟ್ಟುಕೊಂಡಿದ್ದು ಕರ್ನಾಟಕ ಲಲಿತಕಲಾ ಅಕಾಡೆಮಿ ಪ್ರಶಸ್ತಿ ಸೇರಿದಂತೆ ಹಲವು ಗೌರವಗಳಿಗೆ ಭಾಜನರು.

# ವರ್ಣಶಿಲ್ಪಿ ವೆಂಕಟಪ್ಪ ಪ್ರಶಸ್ತಿ ಪುರಸ್ಕೃತರು



## ವಿ.ಜಿ. ಅಂದಾನಿ – 2009

ಕಲಬುರಗಿ ಜಿಲ್ಲೆ ಕೀರಣಗಿಯಲ್ಲಿ ಜನಿಸಿದ ವ್ಹಿ.ಜಿ. ಅಂದಾನಿ ಅವರು ಐಡಿಯಲ್ ಫೈನ್ ಆರ್ಟ್ಸ್ ಕಲಾ ಸಂಸ್ಥೆಯಲ್ಲಿ ಕಲಿತು ರಾಜಾಸ್ಥಾನದ ಬನಸ್ಥಳಿ ವಿದ್ಯಾಪೀಠದಲ್ಲಿ ಭಿತ್ತಿಚಿತ್ರ ಕಲೆಯನ್ನು ಅಭ್ಯಾಸ ಮಾಡಿದವರು.

ದೇಶದುದ್ದಕ್ಕೂ ಕಲಾಕೃತಿಗಳ ಪ್ರದರ್ಶನ ಮಾಡಿ ಹಲವಾರು ರಾಷ್ಟ್ರ ಹಾಗೂ ರಾಜ್ಯಮಟ್ಟ ಪ್ರಶಸ್ತಿ-ಗೌರವಗಳನ್ನು ಪಡೆದಿರುವ ಕರ್ನಾಟಕ ಲಲಿತಕಲಾ ಅಕಾಡೆಮಿ ಅಧ್ಯಕ್ಷರಾಗಿ, ಕೇಂದ್ರ ಲಲಿತಕಲಾ ಅಕಾಡೆಮಿ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ. ಕಲಾಶಿಕ್ಷಕರಾಗಿ ಕಾರ್ಯನಿರ್ವಹಿಸಿರುವ ವಿ.ಜಿ. ಅಂದಾನಿ ಅವರು ಲಲಿತಕಲಾ ಅಕಾಡೆಮಿ ಪ್ರಶಸ್ತಿ-ರಾಜ್ಯೋತ್ಸವ ಪ್ರಶಸ್ತಿ ಸೇರಿದಂತೆ ಹತ್ತಾರು ಪ್ರಶಸ್ತಿಗಳನ್ನು ಪಡೆದಿದ್ದಾರೆ.



## ಕೆ. ಚಂದ್ರನಾಥ ಆಚಾರ್ಯ – 2010

ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರಿನವರಾದ ಕೆ. ಚಂದ್ರನಾಥ ಆಚಾರ್ಯ ಶಾಂತಿನಿಕೇತನದ ವಿಶ್ವಭಾರತಿ ವಿಶ್ವವಿದ್ಯಾಲಯದಿಂದ ಗ್ರಾಫಿಕ್ (ಪ್ರಿಂಟ್) ಮಾಧ್ಯಮದಲ್ಲಿ ಸ್ನಾತಕೋತ್ತರ ಡಿಪ್ಲೊಮಾ ಗಳಿಸಿದವರು.

ದೇಶ ವಿದೇಶಗಳ ಹಲವು ಪ್ರದರ್ಶನಗಳಲ್ಲಿ ಪಾಲ್ಗೊಂಡಿರುವ ಚಂದ್ರನಾಥ ಆಚಾರ್ಯ ಜನಪ್ರಿಯ ಮುಖಪುಟ ಕಲಾವಿದರೆಂಬ ಹೆಗ್ಗಳಿಕೆ ಪಡೆದವರು. 'ಘಟಶ್ರಾದ್ಧ' ಚಿತ್ರವೂ ಸೇರಿದಂತೆ ಹಲವು ಚಲನಚಿತ್ರಗಳಿಗೆ ಕಲಾನಿರ್ದೇಶಕರಾಗಿ ಕಾರ್ಯನಿರ್ವಹಿಸಿರುವ ಚಂದ್ರನಾಥ ಆಚಾರ್ಯ ಚಂಡೀಘಡ ಗ್ರಾಫಿಕ್ ಪ್ರಶಸ್ತಿ – ಕರ್ನಾಟಕ ಲಲಿತಕಲಾ ಅಕಾಡೆಮಿ ಗೌರವ ಸೇರಿದಂತೆ ಹಲವು ಗೌರವ-ಪುರಸ್ಕಾರಗಳಿಗೆ ಪಾತ್ರರು.



## ವಿ.ಬಿ. ಹಿರೇಗೌಡರ್ – 2011

ಧಾರವಾಡ ಜಿಲ್ಲೆಯ ಗುಡಿಗೇರಿಯವರಾದ ವಿ.ಬಿ. ಹಿರೇಗೌಡರ್ ಧಾರವಾಡದ ಸ್ಕೂಲ್ ಆಫ್ ಆರ್ಟ್ಸ್, ಹುಬ್ಬಳ್ಳಿಯ ವಿ.ಎಂ.ಎಲ್.ಕೆ. ಮಹಾವಿದ್ಯಾಲಯಗಳಲ್ಲಿ ಚಿತ್ರಕಲೆಯ ಕಲಾಶಿಕ್ಷಣ, ಜಿ.ಡಿ. ಫೈನ್ ಆರ್ಟ್ ಹಾಗೂ ಆರ್ಟ್ ಮಾಸ್ಟರ್ ಕೋರ್ಸ್ ಮಾಡಿ ಕಲಾಶಿಕ್ಷಕರಾಗಿ ಕೆಲಸ ಮಾಡಿದವರು. ದೇಶದುದ್ದಕ್ಕೂ ಅನೇಕ ಕಲಾ ಪ್ರದರ್ಶನಗಳಲ್ಲಿ ಭಾಗವಹಿಸಿರುವ ವಿ.ಜಿ. ಹಿರೇಗೌಡರ್ ಹಲವು ಕಲಾ ಕಾರ್ಯಾಗಾರಗಳ ನಿರ್ದೇಶಕರು. ದಾವಣಗೆರೆ ಕಲಾ ಕಾಲೇಜು ಪ್ರಿನ್ಸಿಪಾಲರಾಗಿದ್ದ ಇವರಿಗೆ ಕರ್ನಾಟಕ ಲಲಿತಕಲಾ ಅಕಾಡೆಮಿ ಗೌರವ ಪ್ರಶಸ್ತಿ ಸೇರಿದಂತೆ ಹಲವು ಪುರಸ್ಕಾರಗಳು ಸಂದಿವೆ.

## ವರ್ಣಶಿಲ್ಪಿ ವೆಂಕಟಪ್ಪ ಪ್ರಶಸ್ತಿ ಪುರಸ್ಕೃತರು



### ಯು. ಭಾಸ್ಕರರಾವ್ - 2012

ಶಾಲಾ ಕಾಲೇಜುಗಳಲ್ಲಿ ಶಿಲ್ಪ ಚಿತ್ರಕಲೆಯನ್ನು ಅಭ್ಯಾಸ ಮಾಡುತ್ತ ಎಂಜಿನಿಯರಿಂಗ್ ಪದವಿ ಪಡೆದರೂ ಕಲೆಯ ಆಸಕ್ತಿಯನ್ನು ಮುಂದುವರೆಸಿಕೊಂಡು ಬಂದ ಯು.ಭಾಸ್ಕರರಾವ್ ಉಡುಪಿಯವರು.

ಶಿಲ್ಪ ರಚನೆ, ಚಿತ್ರಕಲೆಗಳಲ್ಲಿ ಪರಿಣಿತಿ ಸಾಧಿಸಿದ ಯು. ಭಾಸ್ಕರರಾವ್ ಮ್ಯೂರಲ್ ರಚನೆಯಲ್ಲಿ ಹೆಸರು ಪಡೆದರು. ದೇಶ ವಿದೇಶಗಳಲ್ಲಿ ಇವರ ಕಲಾಕೃತಿಗಳು ಪ್ರದರ್ಶನಗೊಂಡಿದ್ದು ಹಲವಾರು ಗೌರವ ಪುರಸ್ಕಾರಗಳಿಗೆ ಯು. ಭಾಸ್ಕರರಾವ್ ಭಾಜನರಾಗಿದ್ದಾರೆ.



### ಕೆ.ಟಿ. ಶಿವಪ್ರಸಾದ್ - 2013

ಹಾಸನದವರಾದ ಕೆ.ಟಿ. ಶಿವಪ್ರಸಾದ್ ಮುಂಬೈನ ಸರ್ ಜೆ.ಜೆ. ಕಲಾ ಶಾಲೆಯಲ್ಲಿ ಚಿತ್ರಕಲೆಯ ಡಿಪ್ಲೋಮಾ ಪಡೆದು ಅನೇಕ ಪ್ರಯೋಗಗಳನ್ನು ನಡೆಸಿದವರು.

ಇದ್ದಿಲಿನಲ್ಲಿ ಕೃತಿಗಳನ್ನು ರಚಿಸಿ ಗಮನ ಸೆಳೆದ ಕೆ.ಟಿ. ಶಿವಪ್ರಸಾದ್ ತೈಲವರ್ಣ ಚಿತ್ರಗಳಲ್ಲಿ ಪರಿಣಿತಿ ಸಾಧಿಸಿದಲ್ಲದೆ ಛಾಯಾಚಿತ್ರ ಗ್ರಹಣ ತಂತ್ರಗಳನ್ನು ತೈಲವರ್ಣ ಚಿತ್ರ ಕೃತಿ ರಚನೆಯಲ್ಲಿ ಬಳಸಿ ಯಶ ಕಂಡರು. ದೇಶ ವಿದೇಶಗಳ ಹಲವಾರು ಪ್ರದರ್ಶನಗಳಲ್ಲಿ ಇವರ ಕೃತಿಗಳು ಪ್ರದರ್ಶಿತವಾಗಿದ್ದು ಹಲವು ಗೌರವ ಪುರಸ್ಕಾರಗಳು ಕೆ.ಟಿ. ಶಿವಪ್ರಸಾದ್ ಅವರಿಗೆ ಸಂದಿವೆ.



### ಡಾ. ವಿ.ಟಿ. ಕಾಳೆ - 2014

ಬಾಗಲಕೋಟೆ ಜಿಲ್ಲೆ ಹುನಗುಂದದಲ್ಲಿ ಹುಟ್ಟಿದ ವಿ.ಟಿ. ಕಾಳೆ ಅವರ ಗದುಗಿನ ಕಲಾಮಂದಿರದೊಂದಿಗೆ ಒಡನಾಟವಿಟ್ಟುಕೊಂಡಿದ್ದು ಮುಂಬೈನ ಜೆ.ಜೆ. ಶಾಲೆಯಿಂದ ಪದವಿ ಪಡೆದವರು.

ಹಲವು ಶಾಲೆಗಳಲ್ಲಿ ಕಲಾಶಿಕ್ಷಕರಾಗಿ ಕಾರ್ಯನಿರ್ವಹಿಸಿದ ವಿ.ಟಿ. ಕಾಳೆ ರಾಗಮಾಲ ಚಿತ್ರ ರಚನೆ-ಭಿತ್ತಿಚಿತ್ರ ಪ್ರತಿಕೃತಿ ರಚನೆಗಳಲ್ಲಿ ಪಳಗಿದವರು. ಚಿತ್ರಕಲೆ ಕುರಿತಂತೆ ಹಲವು ಕೃತಿಗಳನ್ನು ಬರೆದ ವಿ.ಟಿ. ಕಾಳೆ ಅವರು ಕರ್ನಾಟಕ ಲಲಿತಕಲಾ ಅಕಾಡೆಮಿಯ ಗೌರವ ಪ್ರಶಸ್ತಿ ಮತ್ತಿತರ ಗೌರವಗಳನ್ನು ಪಡೆದಿದ್ದಾರೆ.

## ವರ್ಣಶಿಲ್ಪಿ ವೆಂಕಟಪ್ಪ ಪ್ರಶಸ್ತಿ ಪುರಸ್ಕೃತರು



### ಪೀಟರ್ ಎ. ಲೂಯಿಸ್ - 2015

ಮುಂಬೈನ ಜೆ.ಜೆ. ಕಲಾಶಾಲೆಯಿಂದ ಚಿತ್ರಕಲೆ, ಭಿತ್ತಿಚಿತ್ರ ಅಲಂಕರಣ ಕೋರ್ಸ್‌ಗಳಲ್ಲಿ ಡಿಪ್ಲೋಮಾ ಪಡೆದಿರುವ ಪೀಟರ್, ವಿ. ಲೂಯಿಸ್, ಅವಿಭಾಜಿತ ದಕ್ಷಿಣ ಕನ್ನಡ ಜಿಲ್ಲೆ ತಾನ್ಸೆಯಲ್ಲಿ ಜನಿಸಿದವರು.

ಜಹಂಗೀರ್ ಆರ್ಟ್ ಗ್ಯಾಲರಿ, ತಾಜ್ ಆರ್ಟ್ ಗ್ಯಾಲರಿ ಮೊದಲಾದ ದೇಶದ ಪ್ರತಿಷ್ಠಿತ ಕಲಾಗ್ಯಾಲರಿಗಳ ಪೀಟರ್ ಅವರ ತೈಲಚಿತ್ರಗಳ ಪ್ರದರ್ಶನ ಜರುಗಿವೆ. ಕಲ್ಕತ್ತಾ, ಮದ್ರಾಸ್ ಹಾಗೂ ಕರ್ನಾಟಕ ಲಲಿತಕಲಾ ಅಕಾಡೆಮಿಗಳಿಂದ ತಮ್ಮ ಕೃತಿಗಳಿಗಾಗಿ ಬಹುಮಾನಗಳನ್ನು ಪಡೆದಿರುವ ಪೀಟರ್ ದೇಶದ ಹಲವಾರು ಕಲಾಶಿಬಿರಗಳಲ್ಲಿ ಪಾಲ್ಗೊಂಡಿದ್ದಾರೆ.

ಪೀಟರ್ ಲೂಯಿಸ್ ಕರ್ನಾಟಕ ರಾಜ್ಯೋತ್ಸವ ಹಾಗೂ ಕರ್ನಾಟಕ ಲಲಿತಕಲಾ ಅಕಾಡೆಮಿಯ ಗೌರವ ಪ್ರಶಸ್ತಿ ಪುರಸ್ಕೃತರು.



### ಎಂ.ಆರ್. ಬಾಳೀಕಾಯಿ - 2016

ಹತ್ತಿಕ್ಕೇರಿಯವರಾದ ಎಂ.ಆರ್. ಬಾಳೀಕಾಯಿ ಗದುಗಿನ ವಿಜಯ ಕಲಾಮಂದಿರದಲ್ಲಿ ಕಲಾಭ್ಯಾಸ ಮಾಡಿ ಫೈನ್ ಆರ್ಟ್ಸ್ ಹಾಗೂ ಆರ್ಟ್ಸ್ ಮಾಸ್ಟರ್‌ನಲ್ಲಿ ರ್‍ಯಾಂಕ್ ಪಡೆದುಕೊಂಡವರು. ಕಲಾಶಿಕ್ಷಕರಾಗಿ ಹಲವು ಪ್ರತಿಷ್ಠಿತ ಶಾಲೆಗಳಲ್ಲಿ ಸೇವೆ ಸಲ್ಲಿಸಿರುವ ಎಂ.ಆರ್. ಬಾಳೀಕಾಯಿ ಹಲವಾರು ಏಕವ್ಯಕ್ತಿ ಚಿತ್ರ ಪ್ರದರ್ಶನಗಳನ್ನು ರಾಜ್ಯದುದ್ದಕ್ಕೂ ಏರ್ಪಡಿಸಿದವರು. ಜೈಮಿನಿ ಭಾರತದ ಸನ್ನಿವೇಶಗಳನ್ನು ಮನೋಹರವಾಗಿ ಚಿತ್ರಿಸಿರುವ ಎಂ.ಆರ್. ಬಾಳೀಕಾಯಿ ಕರ್ನಾಟಕ ಲಲಿತಕಲಾ ಅಕಾಡೆಮಿ ಸೇರಿದಂತೆ ಹಲವು ಸಂಘ ಸಂಸ್ಥೆಗಳ ಗೌರವ-ಪುರಸ್ಕಾರಗಳಿಗೆ ಪಾತ್ರರಾಗಿದ್ದಾರೆ.

## ಕರ್ನಾಟಕ ಲಲಿತಕಲಾ ಅಕಾಡೆಮಿ, ಅಧ್ಯಕ್ಷರು

ಕರ್ನಾಟಕ ಲಲಿತಕಲಾ ಅಕಾಡೆಮಿಯ ಅಧ್ಯಕ್ಷರಾಗಿ ಹಲವು ಮಹನೀಯರು ಕಾರ್ಯನಿರ್ವಹಿಸಿದ್ದು ಅಕಾಡೆಮಿಯ ಚಟುವಟಿಕೆಗಳನ್ನು ಆಯಾ ಕಾಲಕ್ಕನುಗುಣವಾಗಿ ವಿಸ್ತರಿಸುತ್ತಾ ಬಂದಿದ್ದಾರೆ. ಭಿನ್ನ ಭಿನ್ನ ಆಲೋಚನೆಗಳು ಮತ್ತು ಯೋಜನೆಗಳು ಜಾರಿಗೊಳ್ಳುವುದರೊಂದಿಗೆ ಅಕಾಡೆಮಿಯು ಸಶಕ್ತವಾಗಿ ಬೆಳೆದಿದೆ. ಆ ಅಧ್ಯಕ್ಷರ ವಿವರವಿದು.



### ಎಸ್.ಆರ್. ಕಂಠಿ (1964-67)

ಚಾಲುಕ್ಯರ ನಾಡು ಬಾದಾಮಿ ಐಹೊಳೆ ಆಸುಪಾಸಿನವರಾದ ಎಸ್.ಆರ್. ಕಂಠಿ ಮೈಸೂರು ರಾಜ್ಯದ ಮುಖ್ಯಮಂತ್ರಿಗಳಾಗಿದ್ದವರು. ವಿದ್ಯಾ ಸಚಿವರಾಗಿ ಕಾರ್ಯನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ಅಧ್ಯಕ್ಷರಾಗಿದ್ದ ಎಸ್. ಆರ್. ಕಂಠಿ ಅವರ ಕಾಲಾವಧಿಯಲ್ಲಿ ಚಿತ್ರಪ್ರದರ್ಶನ, ವಿದ್ಯಾರ್ಥಿ ವೇತನಗಳನ್ನು ನೀಡುವ ಪರಿಪಾಠ ಆರಂಭಗೊಂಡಿತು.



### ಕೆ.ವಿ. ಶಂಕರೇಗೌಡ (1967-70)

ಸ್ವಾತಂತ್ರ್ಯ ಹೋರಾಟದ ಮೂಲಕ ಸಾರ್ವಜನಿಕ ಬದುಕಿಗೆ ಕಾಲಿಟ್ಟ ಕೆ.ವಿ. ಶಂಕರೇಗೌಡರು ಸಕ್ಕರೆ ಸೀಮೆ ಮಂಡ್ಯದವರು. ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಸಕ್ರಿಯರಾಗಿದ್ದ ಕೆ.ವಿ. ಶಂಕರೇಗೌಡರು ಸ್ವತಃ ನಟರು ಹಾಗೂ ಕಥೆಗಾರರು. ಶಿಕ್ಷಣ ಸಚಿವರಾಗಿದ್ದ ಅವರು ಲಲಿತಕಲಾ ಅಕಾಡೆಮ ಅಧ್ಯಕ್ಷರಾಗಿದ್ದರು. ಶಾಲಾ ಕಾಲೇಜುಗಳಲ್ಲಿ ಕಲಾಶಿಕ್ಷಣಕ್ಕೆ ಒತ್ತುಕೊಡುವಂತಹ ಕಾರ್ಯಕ್ರಮಗಳನ್ನು ಅಕಾಡೆಮಿಯಿಂದ ರೂಪಿಸುವ ನಿಟ್ಟಿನಲ್ಲಿ ಪ್ರಯತ್ನ ಆರಂಭವಾಗಿದ್ದು ಇವರ ಅವಧಿಯಲ್ಲಿ.



### ಸುಧಾ ವಿ. ರೆಡ್ಡಿ (1970-74)

ಕಲೆಯಲ್ಲಿ ಆಸಕ್ತಿಯುಳ್ಳ ಸುಧಾ ವಿ. ರೆಡ್ಡಿ ಅವರು ರಾಜ್ಯಸಭಾ ಸದಸ್ಯರಾಗಿ ಕಾರ್ಯನಿರ್ವಹಿಸಿದವರು. ಅಕಾಡೆಮಿ ಅಧ್ಯಕ್ಷ ಗಾದಿಯನ್ನು ಅಲಂಕರಿಸಿದ ಬಳಿಕ ವಾರ್ಷಿಕ ಪ್ರಶಸ್ತಿ. ಕಾರ್ಯಾಗಾರ, ಏಕವ್ಯಕ್ತಿ ಕಲಾಪ್ರದರ್ಶನಗಳಿಗೆ ಪ್ರೋತ್ಸಾಹ, ಹಿರಿಯ ಕಲಾವಿದರಿಂದ ಕಿರಿಯರಿಗೆ ಮಾರ್ಗದರ್ಶನ ಮೊದಲಾದ ಕಾರ್ಯಕ್ರಮಗಳಿಗೆ ಚಾಲನೆ ನೀಡಿದವರು ಸುಧಾ ವಿ. ರೆಡ್ಡಿ.



## ಕೆ.ಕೆ. ಹೆಬ್ಬಾರ್ (1978–81)

ಕೇಂದ್ರ ಹಾಗೂ ರಾಜ್ಯ ಲಲಿತಕಲಾ ಅಕಾಡೆಮಿ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ ಏಕೈಕ ಕನ್ನಡಿಗೆ ಕೆ.ಕೆ. ಹೆಬ್ಬಾರ್ ಅಂತರಾಷ್ಟ್ರೀಯ ಖ್ಯಾತಿಯ ಕಲಾವಿದರು. ಕರ್ನಾಟಕ ಲಲಿತಕಲಾ ಅಕಾಡೆಮಿಗೆ ವಿನೂತನ ಯೋಜನೆಗಳನ್ನು ಪರಿಚಯಿಸುವುದರ ಮೂಲಕ ಕರ್ನಾಟಕ ಕಲಾವಿದರು ರಾಷ್ಟ್ರಮಟ್ಟದಲ್ಲಿ ಹೆಸರು ಪಡೆಯಲು ಕಾರಣರಾದವರು. ರಾಷ್ಟ್ರೀಯ-ಅಂತರಾಷ್ಟ್ರೀಯ ಕಲಾವಿದರನ್ನು ರಾಜ್ಯಕ್ಕೆ ಆಹ್ವಾನಿಸಿ ಕಲಾಶಿಬಿರಗಳನ್ನು ಏರ್ಪಡಿಸುವ ಪರಿಪಾಠ ಆರಂಭವಾಗಿದ್ದು ಕೆ.ಕೆ. ಹೆಬ್ಬಾರ್ ಅವರ ಅಧಿಕಾರದ ಅವಧಿಯಲ್ಲಿ.



## ಪಿ.ಟಿ. ಅಕ್ಕಿ (1981–84)

ಗದುಗಿನ ವಿಜಯಕಲಾ ಶಾಲೆಯ ಸ್ಥಾಪಕರಾದ ಟಿ.ಪಿ. ಅಕ್ಕಿ ಲಕ್ಷೇಶ್ವರದವರು. ಮುಂಬೈ ಜೆ.ಜೆ. ಕಲಾಶಾಲೆಯಲ್ಲಿ ಪದವಿ ಪಡೆದವರು. ಚಿತ್ರಕಲಾ ಶಿಕ್ಷಣಕ್ಕೆ ಒತ್ತು ಕೊಡುವ ಮೂಲಕ ಕಲಾ ಶಿಕ್ಷಣಕ್ಕೆ ಬುನಾದಿ ಹಾಕಲು ಶ್ರಮಿಸಿದವರು. ಚಿತ್ರಕಲೆಯೊಂದಿಗೆ ಸಂಗೀತ-ನೃತ್ಯ-ನಾಟಕಗಳನ್ನು ಅಭ್ಯಾಸ ಮಾಡುವುದನ್ನು ರೂಢಿಗೆ ತಂದ ಟಿ.ಪಿ. ಅಕ್ಕಿ ಅಕಾಡೆಮಿ ಅಧ್ಯಕ್ಷರಾಗಿದ್ದಾಗ ಶೈಕ್ಷಣಿಕ ಕಾರ್ಯಕ್ರಮಗಳು ನಿರಂತರವಾಗಿ ನಡೆಯಲು ಯೋಜನೆ ರೂಪಿಸಿದರು.



## ಸೋಮಶೇಖರ ಎಂ. ಸಾಲಿ (1984–87)

ಸಮಾಜದ ಎಲ್ಲಾ ಜನರನ್ನೂ ಕಲೆ ಮುಟ್ಟಬೇಕೆಂಬ ಉದ್ದೇಶದಿಂದ ಅಕಾಡೆಮಿ ಚಟುವಟಿಕೆಗಳನ್ನು ಜನರ ಬಳಿ ಕೊಂಡೊಯ್ಯಲು ಅನೇಕ ಕಾರ್ಯಕ್ರಮಗಳನ್ನು ಕೈಗೆತ್ತಿಕೊಂಡ ಸೋಮಶೇಖರ ಎಂ. ಸಾಲಿ ಅವರು ತಮ್ಮ ಅಧ್ಯಕ್ಷಾವಧಿಯಲ್ಲಿ ಸುಸಜ್ಜಿತ ಸಂಚಾರಿ ಕಲಾ ಪ್ರದರ್ಶನವನ್ನು ರಾಜ್ಯದುದ್ದಕ್ಕೂ ಏರ್ಪಡಿಸಲು ವ್ಯವಸ್ಥೆ ಮಾಡಿದರು.

# ಕರ್ನಾಟಕ ಲಲಿತಕಲಾ ಅಕಾಡೆಮಿ, ಅಧ್ಯಕ್ಷರು



## ಆರ್.ಎಂ. ಹಡಪದ (1987-90)

ಕರ್ನಾಟಕ ಲಲಿತಕಲಾ ಅಕಾಡೆಮಿಗೆ ಹೊಸದಿಕ್ಕು ತೋರುವಲ್ಲಿ ಯಶಕಂಡ ಆರ್.ಎಂ. ಹಡಪದ್ ಮುಂಬೈನ ಜೆ.ಜೆ. ಕಲಾಶಾಲೆಯಲ್ಲಿ ಜಿ.ಐ. ಆರ್ಟ್ಸ್ ಆರ್ಟ್ ಮಾಸ್ತರ್ ವ್ಯಾಸಂಗ ಮಾಡಿ ಬೆಂಗಳೂರಿನಲ್ಲಿ ಕೆನ್‌ಶಾಲೆಯನ್ನು ಹುಟ್ಟು ಹಾಕಿದವರು. ಯುವ ಕಲಾವಿದರನ್ನು ಪ್ರೋತ್ಸಾಹಿಸುವ ಹಲವು ನವೀನ ಯೋಜನೆಗಳನ್ನು ಅಕಾಡೆಮಿಯಿಂದ ಹಮ್ಮಿಕೊಂಡು ಕಾರ್ಯಗತಗೊಳಿಸಿದವರು ಆರ್.ಎಂ. ಹಡಪದ್ ಅವರು.



## ಪಿ.ಆರ್. ತಿಪ್ಪೇಸ್ವಾಮಿ (1990-95)

ಮೈಸೂರಿನ ಚಾಮರಾಜೇಂದ್ರ ಕಲಾಶಾಲೆಯಲ್ಲಿ ಕಲಿತು ಮೈಸೂರು ಜಾನಪದ ಮತ್ತು ಸಂಗ್ರಹಾಲಯದ ಕ್ಯೂರೇಟರ್ ಆಗಿದ್ದ ಪಿ.ಆರ್. ತಿಪ್ಪೇಸ್ವಾಮಿ ಅವರು ಅಕಾಡೆಮಿ ಅಧ್ಯಕ್ಷರಾಗಿದ್ದಾಗ ಹೊರತಂದ ಹಲವಾರು ಕೃತಿಗಳು ಕರ್ನಾಟಕ ಚಿತ್ರಕಲಾ ಲೋಕವನ್ನು ಬಹುಕಾಲ ನೆನಪಿನಲ್ಲಿ ಇಡುವಂತಹದು. ಕಲಾ ಇತಿಹಾಸ, ಕಲಾವಿದರ ಸರಣಿ ಮೊದಲಾದವು ಈ ಕೃತಿಯ ಮುಖ್ಯಾಂಶಗಳು.



## ಡಾ. ಸಿ. ಚಂದ್ರಶೇಖರ್ (1995-98)

ಬೆಂಗಳೂರು ಕೆನ್‌ಶಾಲೆಯಲ್ಲಿ ಚಿತ್ರಕಲೆ ಕಲಿತು ಶಾಂತಿನಿಕೇತನದ ವಿಶ್ವಭಾರತಿ ವಿಶ್ವವಿದ್ಯಾನಿಲಯದಲ್ಲಿ ಪ್ರಿಂಟ್ ಮೇಕಿಂಗ್‌ನಲ್ಲಿ ಉನ್ನತ ಡಿಪ್ಲೋಮಾ ಪಡೆದ ಸಿ. ಚಂದ್ರಶೇಖರ್ ಅಕಾಡೆಮಿ ಅಧ್ಯಕ್ಷರಾಗಿದ್ದಾಗ ವಿಶೇಷ ಯೋಜನೆಯನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಅನುದಾನದಲ್ಲಿ ಆರಂಭಿಸಿ ಅಕಾಡೆಮಿಯಿಂದ ಗ್ರಾಮೀಣ ಭಾಗದ ಜನರೂ ಅನುಕೂಲ ಪಡೆದುಕೊಳ್ಳುವಂತೆ ಮಾಡಿದರು.

## ಕರ್ನಾಟಕ ಲಲಿತಕಲಾ ಅಕಾಡೆಮಿ, ಅಧ್ಯಕ್ಷರು



### ವಿ.ಜಿ. ಅಂದಾನಿ (1998-2001)

ರಾಜಾಸ್ಥಾನದ ಬನಸ್ಥಳ ವಿದ್ಯಾಪೀಠದಲ್ಲಿ ಭಿತ್ತಿ ಚಿತ್ರಕಲೆ ಹಾಗೂ ಕಲಬುರಗಿಯ ಐಡಿಯಲ್ ಫೈನ್ ಆರ್ಟ್ಸ್ ಕಲಾ ಸಂಸ್ಥೆಯಲ್ಲಿ ಚಿತ್ರಕಲೆ ಅಭ್ಯಾಸ ಮಾಡಿದ ವಿ.ಜಿ. ಅಂದಾನಿ ಅವರು ಕೇಂದ್ರ ಲಲಿತಕಲಾ ಅಕಾಡೆಮಿ ಸೇರಿದಂತೆ ಹಲವು ಸಂಘ ಸಂಸ್ಥೆಗಳಿಂದ ಗೌರವ-ಪುರಸ್ಕಾರ ಗಳಿಸಿದರು. ಕಲಾ ವಿದ್ಯಾರ್ಥಿಗಳಿಗೆ ಹೆಚ್ಚಿನ ಅನುಭವ ಗಳಿಸಿಕೊಳ್ಳಲು ಕಲಾಶಿಬಿರಗಳನ್ನು ರಾಜ್ಯದುದ್ದಕ್ಕೂ ಏರ್ಪಡಿಸಿದ್ದು ಇವರ ಅಧಿಕಾರಾವಧಿಯ ವಿಶೇಷ.



### ಪೀಟರ್ ಲೂಯಿಸ್ (2001-2004)

ಕರಾವಳಿಯಲ್ಲಿ ಜನಿಸಿದ ಪೀಟರ್ ಲೂಯಿಸ್ ಮುಂಬೈ ಜೆ.ಜೆ. ಕಲಾಶಾಲೆಯಲ್ಲಿ ಕಲಿತವರು. ಅಕಾಡೆಮಿ ಅಧ್ಯಕ್ಷರಾಗಿದ್ದಾಗ 'ಯಂಗ್ ಸ್ಟ್ರೋಕ್ಸ್' ಚಿತ್ರಕಲಾ ಪ್ರದರ್ಶನವನ್ನು ಮುಂಬೈ-ದೆಹಲಿಯಲ್ಲಿ ಏರ್ಪಡಿಸಲು ಯೋಜನೆ ಮಾಡಿದರು. ಹಳ್ಳಿಗಾಡಿನ ಎತ್ತಿನ ಬಂಡಿಗಳ ಮೇಲೆ ಚಿತ್ರಕಲೆ ಮೂಡಿಸುವ ಕೆಲಸವನ್ನು ಅಕಾಡೆಮಿ ಮೂಲಕ ಹಮ್ಮಿಕೊಂಡವರು ಪೀಟರ್ ಲೂಯಿಸ್ ಅವರು.



### ಎಂ.ಬಿ. ಬಸವರಾಜ್ (2005-07)

ಮೈಸೂರಿನಲ್ಲಿ ಜನಿಸಿ ಅಲ್ಲಿಯೇ ಚಾಮರಾಜೇಂದ್ರ ಕಲಾ ಶಾಲೆಯಲ್ಲಿ ಪದವಿ ಪಡೆದ ಎಂ.ಬಿ. ಬಸವರಾಜ್ ಮೈಸೂರು ಶೈಲಿಯ ಸಾಂಪ್ರದಾಯಿಕ ಚಿತ್ರಕಲೆಯನ್ನು ಆಳವಾಗಿ ಅಭ್ಯಾಸ ಮಾಡಿದವರು. ಅಕಾಡೆಮಿ ಅಧ್ಯಕ್ಷರಾಗಿದ್ದಾಗ ಪ್ರತಿ ತಿಂಗಳೂ ಚಿತ್ರಪ್ರದರ್ಶನ ಏರ್ಪಡಿಸುವ ಕಾರ್ಯಕ್ರಮವನ್ನು ಚಾಲನೆ ಮಾಡಿದ್ದು ಎಂ.ಬಿ. ಬಸವರಾಜ್ ಅವರು.

## ಕರ್ನಾಟಕ ಲಲಿತಕಲಾ ಅಕಾಡೆಮಿ, ಅಧ್ಯಕ್ಷರು



### ಡಾ. ವಿ.ಟಿ. ಕಾಳೆ (2007-2008)

ಮುಂಬೈನ ಜೆ.ಜೆ. ಕಲಾಶಾಲೆ ಗದುಗಿನ ಕಲಾಮಂದಿರದಲ್ಲಿ ಕಲಿತ ವಿ.ಟಿ. ಕಾಳೆ ಕಲಾಶಿಕ್ಷಕರಾಗಿ ಹೆಸರು ಗಳಿಸಿದರು. ಅಕಾಡೆಮಿ ಅಧ್ಯಕ್ಷ ಪದವಿಯಲ್ಲಿದ್ದಾಗ ಚಿತ್ರಕಲೆಗೆ ಸಂಬಂಧಿಸಿದ ಹಲವು ಪುಸ್ತಕಗಳನ್ನು ಪ್ರಕಟಿಸಲು ಕ್ರಮಕೈಗೊಂಡ ವಿ.ಟಿ. ಕಾಳೆ ಅವರು ಸ್ವತಃ ಲೇಖನ ಕೃಷಿ ಮಾಡಿದವರು.



### ಜೆ.ಎಸ್. ಖಂಡೇರಾವ್ (2008-11)

ಬೆಳಗಾವಿಯಲ್ಲಿ ವಿಶ್ವಕನ್ನಡ ಸಮ್ಮೇಳನ ಜರುಗಿದಾಗ ಅಕಾಡೆಮಿ ಅಧ್ಯಕ್ಷರಾಗಿದ್ದಾಗ ಜೆ.ಎಸ್. ಖಂಡೇರಾವ್ ಕರ್ನಾಟಕದ ಪ್ರಮುಖ ಕಲಾವಿದರ ಶಿಬಿರವನ್ನು ಬೆಳಗಾವಿಯಲ್ಲಿ ಏರ್ಪಡಿಸಿ, ಅಲ್ಲಿ ಮೂಡಿಬಂದ ಕಲಾಕೃತಿಗಳನ್ನು ಸಮ್ಮೇಳನದಲ್ಲಿ ವ್ಯವಸ್ಥೆ ಮಾಡಿದರು. ಮುಂಬೈ ಜೆ.ಜೆ. ಕಲಾ ಶಾಲೆಯಲ್ಲಿ ಕಲಿತ ಜೆ.ಎಸ್. ಖಂಡೇರಾವ್ ಹಂಪಿ ವಿಶ್ವವಿದ್ಯಾನಿಲಯದ 'ನಾಡೋಜ' ಗೌರವ ಪುರಸ್ಕೃತರು.



### ಚಿ.ಸು. ಕೃಷ್ಣಶೆಟ್ಟಿ (2012-13)

'ಚಿತ್ರ ಪರಿಷೆ'ಯಂತಹ ಹೊಸ ಬಗೆಯ ಕಾರ್ಯಕ್ರಮವನ್ನು ತಾವು ಅಕಾಡೆಮಿ ಅಧ್ಯಕ್ಷರಾಗಿದ್ದಾಗ ಆರಂಭಿಸಿದ ಚಿ.ಸು. ಕೃಷ್ಣಸೆಟ್ಟಿ ಚಿತ್ರಕಲೆಯ ಬೆಳವಣಿಗೆಗಾಗಿ ಕಲಾವಿದರು-ಆಡಳಿತಗಾರರೊಂದಿಗೆ ಹಲವಾರು ಸಮಾಲೋಚನಾ ಸಭೆಗಳನ್ನು ಏರ್ಪಡಿಸಿದರು. ದಾವಣಗೆರೆ ಸರ್ಕಾರಿ ಕಲಾಶಾಲೆಯಿಂದ ಲಲಿತಕಲಾ ಡಿಪ್ಲೋಮಾ, ನವದೆಹಲಿಯ ಗಡಿ ಗ್ರಾಫಿಕ್ ಸ್ಟುಡಿಯೋದಲ್ಲಿ ಹೆಚ್ಚಿನ ಅಧ್ಯಯನ ಮಾಡಿದವರು ಚಿ.ಸು. ಕೃಷ್ಣಶೆಟ್ಟಿ.



## ಡಾ. ಎಂ.ಎಸ್. ಮೂರ್ತಿ

**(26.02.2014ರಿಂದ 19.06.2014 ಹಾಗೂ 13.08.2014ರಿಂದ 13.08.2017)**

ಸಂವೇದನಾಶೀಲ ಕಲಾವಿದರೆಂದೇ ಗುರುತಿಸಲ್ಪಡುವ ಡಾ.ಎಂ.ಎಸ್.ಮೂರ್ತಿ ಅವರು ಬೆಂಗಳೂರಿನಲ್ಲಿ 1950ರಲ್ಲಿ ಹುಟ್ಟಿದವರು. ಐದು ವರ್ಷಗಳ ಕಲಾಶಿಕ್ಷಣವನ್ನು ಪೂರೈಸಿದ ಬಳಿಕ ಪೂರ್ಣಾವಧಿ ಕಲಾವಿದರಾಗಿ ಕಲಾಕೃತಿಗಳ ರಚನೆಯಲ್ಲಿ ತೊಡಗಿಕೊಂಡವರು. ನಿಯತಕಾಲಿಕೆ, ಸಾಹಿತ್ಯ ಕೃತಿಗಳಿಗೆ ಮುಖಪುಟ ಚಿತ್ರ ರಚನೆಗೆ ಹೆಸರಾದವರು. ಸಾಹಿತ್ಯ ಮತ್ತು ಕಲೆ ಅವರ ಸಮಾನ ಆಸಕ್ತಿಗಳು. 'ಮಕ್ಕಳ ಮನಸ್ಸಿನ ಚಿತ್ರಗಳು' ಮಹಾಪ್ರಬಂಧಕ್ಕೆ ಹಂಪಿ ವಿಶ್ವವಿದ್ಯಾಲಯದಿಂದ ಡಾಕ್ಟರೇಟ್ ಪಡೆದವರು. ಮೂರ್ತಿ ಅವರ 'ಬುದ್ಧನೆಂಬ ಬೆಳಕು' (ಬುದ್ಧ ದಿ ಲೈಟ್) ಕೃತಿಗೆ ಇರಾನ್ ದೇಶದ ಅಕಾಡೆಮಿ ಆಫ್ ಆರ್ಟ್ಸ್‌ನ 'ಅಂತರಾಷ್ಟ್ರೀಯ ಬೈನಾಲೆ ಪ್ರಶಸ್ತಿ' ಯ ಗೌರವ ಸಂದಿದೆ. ಅವರ ಸಾಹಿತ್ಯ ಗ್ರಂಥ 'ದೇಸಿ ನಗು' ಪ್ರಬಂಧ ಸಂಕಲನಕ್ಕೆ 2006ರ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಯಶೋಧರೆ ಮಲಗಿರಲಿಲ್ಲ' ಎಂಬ ನಾಟಕಕ್ಕೆ ಆಕಾಶವಾಣಿ ರಾಷ್ಟ್ರೀಯ ಉತ್ಸವ ನಾಟಕ ಪ್ರಶಸ್ತಿ ಬಂದಿದೆ. 'ದೃಶ್ಯ' ಕಲಾಲೋಕದ ಮೊದಲ ಕಾದಂಬರಿಯಾಗಿದ್ದು ಕರ್ನಾಟಕ ಪುಸ್ತಕ ಪ್ರಾಧಿಕಾರದ 'ಪುಸ್ತಕ ಸೊಗಸು' ಗೌರವಕ್ಕೆ ಪಾತ್ರವಾಗಿದೆ. 2016ರಲ್ಲಿ ದಸರಾ ಕಲಾಪುರಸ್ಕಾರ, ಶ್ರೀ ಡಿ.ವಿ. ಹಾಲಭಾವಿ ರಾಷ್ಟ್ರೀಯ ಪ್ರಶಸ್ತಿ ಪುರಸ್ಕೃತರು. ಕರ್ನಾಟಕ ಲಲಿತಕಲಾ ಅಕಾಡೆಮಿಯ ಅಧ್ಯಕ್ಷರಾಗಿ ಸಾರ್ಥಕ ಸೇವೆಗೈದಿರುವ ಮೂರ್ತಿ ಅವರ ಕಲಾಕೃತಿಗಳು ದೆಹಲಿಯ ಪ್ರತಿಷ್ಠಿತ ನ್ಯಾಷನಲ್ ಗ್ಯಾಲರಿ ಆಫ್ ಮಾಡರ್ನ್ ಆರ್ಟ್ ಸೇರಿದಂತೆ ರಾಷ್ಟ್ರ-ಅಂತರಾಷ್ಟ್ರೀಯ ಗ್ಯಾಲರಿಗಳ ಕಲಾಸಂಗ್ರಹದಲ್ಲಿರುವುದು ವಿಶೇಷ.

ತಿಂಗಳ ಚಿತ್ರ, ಪಡಸಾಲೆ ಆರ್ಟ್ ಗ್ಯಾಲರಿ, ಕಲಾ ಸಂಕ್ರಾಂತಿ ರಾಷ್ಟ್ರೀಯ ಪುರಸ್ಕಾರ, ರಾಷ್ಟ್ರೀಯ ಚಿತ್ರಕಲಾ ಶಿಬಿರ, ವಿಚಾರಸಂಕೀರ್ಣಗಳು, ಕಲಾ ವೈಚಾರಿಕ ಸಾಹಿತ್ಯ-ಚಿತ್ರ ಸಂಪುಟದ ಆರು ಕೃತಿಗಳ ಪ್ರಕಟಣೆ, ಕಲಾವಾರ್ತೆಗೆ ಹೊಸ ರೂಪ, ಕಲಾ ಸಂಚಾರ ಮುಂತಾದ ವಿನೂತನ – ಅರ್ಥಪೂರ್ಣ ಯೋಜನೆ – ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತಂದಿದ್ದು ಮೂರ್ತಿ ಅವರ ಅಧ್ಯಕ್ಷಾವಧಿಯ ಸಾಧನೆಗಳು.

# ಕೇಂದ್ರ ಲಲಿತಕಲಾ ಅಕಾಡೆಮಿ ಬಹುಮಾನ ಪುರಸ್ಕೃತರು - 1955-2016

| | | |
|---|---|---|
| 1. | ಶ್ರೀ ಕೆ.ಎಸ್. ಕುಲಕರ್ಣಿ | 1955 |
| 2. | ಶ್ರೀ ಎ.ಎ. ಅಲ್‌ಮೆಲ್ಕರ್ | 1956 |
| 3. | ಶ್ರೀ ಕೆ.ಕೆ. ಹೆಬ್ಬಾರ್ | 1958 |
| 4. | ಶ್ರೀ ಎಸ್.ಜಿ. ವಾಸುದೇವ್ | 1967 |
| 5. | ಶ್ರೀ ಬಾಲನ್ ನಂಬಿಯಾರ್ | 1981 |
| 6. | ಶ್ರೀ ಯೂಸಫ್ ಅರಕ್ಕಲ್ | 1983 |
| 7. | ಶ್ರೀ ವಿಜಯ ಸಿಂಧೂರ | 1983 |
| 8. | ಶ್ರೀ ಕೆ.ಆರ್. ಸುಬ್ಬಣ್ಣ | 1984 |
| 9. | ಶ್ರೀಮತಿ ಎನ್. ಪುಷ್ಪಮಾಲಾ | 1984 |
| 10. | ಶ್ರೀ ಎಲ್.ಪಿ. ಅಂಚನ್ | 1985 |
| 11. | ಶ್ರೀ ಕೆ.ಎಸ್. ರಾವ್ | 1985 |
| 12. | ಶ್ರೀ ಆರ್. ಉಮೇಶ್ | 1987 |
| 13. | ಶ್ರೀ ಎ. ಅಲ್ಫಾನ್ಸೊ | 1988 |
| 14. | ಶ್ರೀ ವಿ.ಜಿ. ಅಂದಾನಿ | 1992 |
| 15. | ಶ್ರೀ ವೆಂಕಟಾಚಲಪತಿ | 1996 |
| 16. | ಶ್ರೀ ವಿಜಯ ಬಾಗೋಡಿ | 1997 |
| 17. | ಶ್ರೀ ಶೇಷಿರಾವ್ ಆರ್. ಬಿರಾದಾರ್ | 1997 |
| 18. | ಶ್ರೀ ಜಿ.ಆರ್. ಈರಣ್ಣ | 1997 |
| 19. | ಶ್ರೀ ಕೆ.ಎಸ್. ರಂಗನಾಥ್ | 1997 |
| 20. | ಶ್ರೀ ವಿರೇಂದ್ರ ಶಾಹ, ಕಲಬುರಗಿ | 1997 |
| 21. | ಶ್ರೀ ಎಂ.ಬಿ. ಲೋಹಾರ್, ಕಲಬುರಗಿ | 1997 |
| 22. | ಶ್ರೀ ಹೆಚ್.ಜಿ. ಅರುಣ್‌ಕುಮಾರ್ | 1998 |
| 23. | ಶ್ರೀ ರವಿಕುಮಾರ್ ಕಾಶಿ | 1999 |
| 24. | ಶ್ರೀ ರಾಮದಾಸ ಆಡ್ಯಂತಾಯ | 2001 |
| 25. | ಶ್ರೀ ಸುನೀಲ್ ಮಮದಾಫರ | 2002 |
| 26. | ಶ್ರೀ ರಾಜೇಶ್ ಬಿ. ಆಚಾರ್ಯ | 2002 |
| 27. | ಶ್ರೀ ಬಿ. ದೇವರಾಜ, ಬೆಂಗಳೂರು | 2004 |
| 28. | ಶ್ರೀ ಗುರುಸಿದ್ದಪ್ಪ, ಬೆಂಗಳೂರು | 2004 |
| 29. | ಶ್ರೀ ಶಿವಾನಂದ ಬಸವಂತಪ್ಪ | 2008 |
| 30. | ಶ್ರೀ ಗಣಪತಿ ಪಿ. ಹೆಗಡೆ, ಬೆಂಗಳೂರು | 2010 |
| 31. | ಶ್ರೀ ಮಹಮ್ಮದ್ ಅಯಾಜುದ್ದಿನ್ ಪಟೇಲ್, ಕಲಬುರಗಿ | 2014 |
| 32. | ಶ್ರೀ ಶ್ರೀನಿವಾಸ ರೆಡ್ಡಿ, ಚಿಕ್ಕಬಳ್ಳಾಪುರ | 2014 |
| 33. | ಶ್ರೀ ಸಂಜೀವ್ ರಾವ್ ಗುತ್ತಿ, ಬೆಂಗಳೂರು | 2014 |
| 34. | ಶ್ರೀ ಮಂಜುನಾಥ್ ಕಲ್ಲಿದೇವರು, ದಾವಣಗೆರೆ | 2015 |
| 35. | ಶ್ರೀ ಸತೀಶ್ ಹನುಮಂತಪ್ಪ ಮುಳ್ಳಳ್ಳಿ, ಹಾವೇರಿ | 2016 |
| 36. | ಶ್ರೀ ಸುರೇಶ್.ಕೆ, ಮೈಸೂರು | 2016 |

# ಗೌರವ ಡಾಕ್ಟರೇಟ್ ಪಡೆದ ಕಲಾವಿದರು

| | | | |
|---|---|---|---|
| 1. | ಎಸ್.ಎಂ.ಪಂಡಿತ್ | – | ಗುಲ್ಬರ್ಗಾ ವಿಶ್ವವಿದ್ಯಾಲಯ |
| 2. | ಕೆ.ಕೆ.ಹೆಬ್ಬಾರ್ | – | ಮಂಗಳೂರು ವಿಶ್ವವಿದ್ಯಾಲಯ |
| 3. | ಜೆ.ಎಸ್.ಖಂಡೇರಾವ್ | – | ಗುಲ್ಬರ್ಗಾ ವಿಶ್ವವಿದ್ಯಾಲಯ |
| 4. | ವಿ.ಜಿ.ಅಂದಾನಿ | – | ಗುಲ್ಬರ್ಗಾ ವಿಶ್ವವಿದ್ಯಾಲಯ |
| 5. | ಡಾ.ಸಿ.ಚಂದ್ರಶೇಖರ್ | – | ಮೈಸೂರು ವಿಶ್ವವಿದ್ಯಾಲಯ |
| 6. | ಡಾ.ವಿ.ಟಿ.ಕಾಳೆ | – | ಗುಲ್ಬರ್ಗಾ ವಿಶ್ವವಿದ್ಯಾಲಯ |
| 7. | ಬಿ.ಕೆ.ಎಸ್.ವರ್ಮ | – | ಬೆಂಗಳೂರು ವಿಶ್ವವಿದ್ಯಾಲಯ |
| 8. | ವಿ.ಬಾಲು | – | ಬೆಂಗಳೂರು ವಿಶ್ವವಿದ್ಯಾಲಯ |

# ಕನ್ನಡ ವಿಶ್ವವಿದ್ಯಾಲಯದಿಂದ ಡಿ.ಲಿಟ್ ಪದವಿ ಪಡೆದವರ ವಿವರ

| ಅಭ್ಯರ್ಥಿಯ ಹೆಸರು | ವಿಷಯ | ವರ್ಷ |
|---|---|---|
| **ಡಾ. ದೇವದಾಸ ಕಳಸದ** | ಕರ್ನಾಟಕದ ರಂಗಭೂಮಿ, ರಂಗಸಜ್ಜಿಕೆ ಮತ್ತು ಪ್ರಸಾದನ ಕಲೆ | 2001 |
| **ಡಾ. ಆನಂದ ಪೂಜಾರ** | ಕರಾವಳಿಯ ಕಾವಿ ಚಿತ್ರಕಲೆ | 2005 |
| **ಡಾ. ಡಿ.ಎ. ಉಪಾಧ್ಯ** | ವಾಸ್ತು-ಶಿಲ್ಪ-ಚಿತ್ರಕಲೆಯ ಹಿನ್ನೆಲೆಯಲ್ಲಿ ದೃಶ್ಯಕಲೆಗಳ ತೌಲನಿಕ ಅಧ್ಯಯನ | 2005 |
| **ಡಾ. ಎಂ. ಎಸ್. ಮೂರ್ತಿ** | ಮಕ್ಕಳ ಮನಸ್ಸಿನ ಚಿತ್ರಗಳು | 2010 |
| **ಡಾ.ಜಿ.ಎಸ್. ಭೂಸಗೊಂಡ** | ಚಿತ್ರಕಲಾವಿದ ಚಂದ್ರವರ್ಮ ಬಿ. ಆರ್. ಕೋಟ್ಯಾಳಕರ - ಒಂದು ಅಧ್ಯಯನ | 2013 |

# ಡಾಕ್ಟರೇಟ್ ಪಡೆದ ಕಲಾವಿದರು

ಡಾ. ಬಿ. ಕೆ. ಹಿರೇಮಠ (1987)

ಡಾ. ಎಸ್. ಸಿ. ಪಾಟೀಲ (1991)

ಡಾ. ಅ.ಲ.ನರಸಿಂಹನ್ (1998)

ಡಾ. ಸಂಪದಾ ಭಟ್ (1998)

ಡಾ. ಪುಷ್ಪಾ ದ್ರಾವಿಡ (1997)

ಡಾ. ಯಾದಪ್ಪ ಪರದೇಶಿ (2001)

ಡಾ. ಶಿವಾನಂದ ಬಂಟನೂರು (2002)

ಡಾ. ಗಿರೀಶ (2002)

ಡಾ. ಲಕ್ಷ್ಮಿದೇವಿ ಗವಾಯಿ (2002)

ಡಾ. ಶರಣಪ್ಪ ಕೋಲ್ಕಾರ (2002)

ಡಾ. ಸೌಮ್ಯಾ (2002)

ಡಾ. ಪ್ರಮೀಳಾ ಲೋಚನ (2002)

ಡಾ. ವೀಣಾ ಶೇಖರ (2003)

ಡಾ. ಸಿದ್ಧಲಿಂಗಸ್ವಾಮಿ ಹಿರೇಮಠ (2003)

ಡಾ. ಎಸ್.ಸಿ. ಪಾಟೀಲ (2002)

ಡಾ. ಎಂ.ವ್ಹಿ. ಬಾಗಾಯತ್ (2004)

ಡಾ. ಜಿ. ಶಿವಕುಮಾರ (2004)

ಡಾ. ಪಿ. ಗೌರೀಶ (2004)

ಡಾ. ಶಶಿಕಲಾ ಹೂಗಾರ (2004)

ಡಾ. ಶಿವಪ್ರಕಾಶ ಎಲ್. ತುಕ್ಕಣ್ಣವರ (2004)

ಡಾ. ಎಸ್.ವಿ. ವೆಂಕಟೇಶಯ್ಯ (2005)

ಡಾ. ಎಚ್.ಎನ್.ಚಿತ್ರಗಾರ (2005)

ಡಾ. ವಿಶ್ವೇಶ್ವರಿ ತಿವಾರಿ (2006)

ಡಾ. ಮಲ್ಲಿಕಾರ್ಜುನ ಸಿ. ಬಾಗೋಡಿ (2007)

ಡಾ. ಗೀತಾಂಜಲಿ ಬಿ.ಆರ್. (2007)

ಡಾ. ಲಕ್ಷ್ಮಣಸಿಂಗ್ ಆರ್. ರಾಠೋಡ (2007)

ಡಾ. ಮೋಹನ್ ಪಂಚಾಳ (2008)

ಡಾ. ವಿಶ್ವನಾಥ ಎ.ಎಸ್. (2008)

ಡಾ. ರವೀಂದ್ರ ಎಸ್. ಕಮ್ಮಾರ (2008)

ಡಾ. ಪಿ.ಟಿ. ಲಕ್ಕಣ್ಣನವರ (2008)

ಡಾ. ಲಕ್ಷ್ಮೀಪತಿ ಜಿ. (2008)

ಡಾ. ಮಂಟಗಿ (2009)

ಡಾ. ರೆಹಮಾನ ಪಟೇಲ (2009)

ಡಾ. ಸುನಿತಾ ಪಾಟೀಲ (2010)

ಡಾ. ನಿಂಗಪ್ಪ ಎಂ. ಅಂಗಡಿ (2010)

ಡಾ. ಕಿಶೋರ ಎನ್. ದಾಟನಾಳ (2011)

ಡಾ. ಸತೀಶಕುಮಾರ ವಲ್ಲ್ಯೇಪೂರೆ (2011)

ಡಾ. ಶಂಕರ ಕುಂದಗೋಳ (2011)

ಡಾ. ಭಾರತಿ ಮರವಂತಿ (2012)

ಡಾ. ಕಾಮಾಕ್ಷಿ ಸಿ. ಸೊಪ್ಪಣ (2012)

ಡಾ. ಪರಶುರಾಮ ಪಿ. (2012)

ಡಾ. ಶಾಹೆದ್ ಪಾಷಾ (2012)

ಡಾ. ಬಿ.ಎಲ್. ಲಮಾಣಿ (2013)

ಡಾ. ರೇಣುಕಾ ಮಾರ್ಕಂಡೆ (2013)

ಡಾ. ಶಶಿಕಲಾ ನಂದನಗೌಡ (2013)

ಡಾ. ಕೃಷ್ಣೇಗೌಡ ಹೆಚ್. ಎನ್ (2013)

ಡಾ. ಬಿ. ಎಂ. ಪಾಟೀಲ (2013)

ಡಾ. ಕೃಷ್ಣವೇಣಿ (2013)

ಡಾ. ರವಿ ವಸಾರಾಮ ನಾಯಕ (2013)

ಡಾ. ಮಹಾಂತೇಶ ಎಂ. ಪಲದಿನ್ನಿ (2013)

ಡಾ. ಪಿ.ಬಿ. ಗವಾನಿ (2013)

ಡಾ. ಸುಚಿತ್ರಾ ಜಿ. ಲಿಂಗದಳ್ಳಿ (2013)

ಡಾ. ಬಸವಯ್ಯ ಗವಿಮಠ (2013)

ಸುಬ್ಬಯ್ಯ ಮಹಾದೇವಯ್ಯ ನೀಲಾ (2013)

ಜ್ಯೋತಿ ಎಸ್. ವೈದ್ಯಾ (2015)

ಪರಮಶಿವಂ (2015)

ಅಶೋಕ ಶಟಗಾರ (2016)

ಬಸವರಾಜ ಅನಗವಾಡಿ (2017)

ಸಂತೋಷಕುಮಾರ ಎಂ. ನಾಗರಾಳ (2017)

# ಪ್ರತಿಷ್ಠಿತ ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತರು

**ಕ**ರ್ನಾಟಕ ಸರ್ಕಾರ ಪ್ರತಿ ಕ್ಷೇತ್ರಗಳಲ್ಲಿ ಗಣನೀಯ ಸಾಧನೆಗೈದ ಸಾಧಕರಿಗೆ ಪ್ರತಿ ವರ್ಷ ಅತ್ಯುನ್ನತ ಗೌರವವಾಗಿ ರಾಜ್ಯೋತ್ಸವ ಪ್ರಶಸ್ತಿಗಳನ್ನು ನೀಡುತ್ತಾ ಬಂದಿದೆ. ಈ ಪೈಕಿ ಚಿತ್ರಕಲೆಯಲ್ಲಿ ಗಮನೀಯ ಸೇವೆ ಸಲ್ಲಿಸಿದ ಸಾಧಕರಿಗೆ ರಾಜ್ಯೋತ್ಸವ ಪ್ರಶಸ್ತಿ ಸಂದಿದ್ದು ಆ ಸುವರ್ಣ ಕಲಾವಿದರ ವಿವರ.

| | | | |
|---|---|---|---|
| 1. | ಶ್ರೀ ಎನ್. ಹನುಮಯ್ಯ | ಚಿತ್ರಕಲೆ | 1971 |
| 2. | ಶ್ರೀ ವೈ. ಸುಬ್ರಹ್ಮಣ್ಯರಾಜು | ಚಿತ್ರಕಲೆ | 1972 |
| 3. | ಶ್ರೀ ಆರ್.ಎಸ್. ನಾಯ್ಡು | ಚಿತ್ರಕಲೆ | 1973 |
| 4. | ಶ್ರೀ ಎಂ. ನಂಜುಂಡಯ್ಯ | ಚಿತ್ರಕಲೆ | 1974 |
| 5. | ಶ್ರೀ ಪಿ.ಆರ್. ತಿಪ್ಪೇಸ್ವಾಮಿ | ಚಿತ್ರಕಲೆ | 1975 |
| 6. | ಶ್ರೀ ಎಸ್.ಎಸ್. ಕುಕ್ಕೆ | ಚಿತ್ರಕಲೆ | 1976 |
| 7. | ಶ್ರೀ ಮಧುಗಿರಿ ರಾಮು | ಚಿತ್ರಕಲೆ | 1981 |
| 8. | ಶ್ರೀ ಶಿಲ್ಪಿಶ್ಯಾಮಾಚಾರ್ | ಚಿತ್ರಕಲೆ | 1981 |
| 9. | ಶ್ರೀ ಬಸವಣ್ಣ ಶಿಲ್ಪಿ | ಚಿತ್ರಕಲೆ | 1982 |
| 10. | ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯ | ಚಿತ್ರಕಲೆ | 1982 |
| 11. | ಡಾ. ಡಿ.ವಿ. ರಾವ್ | ಛಾಯಾಚಿತ್ರ | 1982 |
| 12. | ಶ್ರೀ ಟಿ.ಎಸ್. ಸತ್ಯನ್ | ಛಾಯಾಚಿತ್ರ | 1982 |
| 13. | ಶ್ರೀ ರುಮಾಲೆ ಚೆನ್ನಬಸಪ್ಪ | ಚಿತ್ರಕಲೆ | 1983 |
| 14. | ಶ್ರೀ ಎಸ್.ಎಂ. ಪಂಡಿತ್ | ಚಿತ್ರಕಲೆ | 1983 |
| 15. | ಶ್ರೀ ಆರ್.ಕೆ. ಲಕ್ಷ್ಮಣ್ | ವ್ಯಂಗ್ಯಚಿತ್ರ | 1983 |
| 16. | ಶ್ರೀ ಎಫ್.ಎಂ. ಸೂಫಿ | ಚಿತ್ರಕಲೆ | 1984 |
| 17. | ಶ್ರೀ ಎಂ.ಎಸ್. ನಂಜುಂಡರಾವ್ | ಚಿತ್ರಕಲೆ | 1984 |
| 18. | ಶ್ರೀ ಸಾಬಣ್ಣನವರ ನಾಗೇಶ್ ಭೀಮರಾವ್ | ಚಿತ್ರಕಲೆ | 1984 |
| 19. | ಶ್ರೀ ಎಂ.ವೈ. ಘೋರ್ಪಡೆ | ಛಾಯಾಚಿತ್ರ | 1984 |
| 20. | ಶ್ರೀ ಆರ್. ಮೂರ್ತಿ | ವ್ಯಂಗ್ಯಚಿತ್ರ | 1984 |
| 21. | ಡಾ. ಕೆ.ಕೆ. ಹೆಬ್ಬಾರ್ | ಚಿತ್ರಕಲೆ | 1985 |
| 22. | ಶ್ರೀ ರಂಜಾಳ ಗೋಪಾಲಕೃಷ್ಣ ಶೆಣೈ | ಶಿಲ್ಪಕಲೆ | 1985 |
| 23. | ಶ್ರೀ ಎಸ್.ವಿ. ನಾಯಕ | ಚಿತ್ರಕಲೆ | 1985 |
| 24. | ಶ್ರೀ ಬಿ.ವಿ.ಕೆ. ಶಾಸ್ತ್ರಿ | ಕಲಾವಿಮರ್ಶೆ | 1985 |
| 25. | ಶ್ರೀ ಗಣಪತಿ ಸುಂದರಂ ಥಾಮಸ್ | ಛಾಯಾಚಿತ್ರ | 1985 |
| 26. | ಶ್ರೀ ಡಿ. ವಾದಿರಾಜ್ | ಶಿಲ್ಪಕಲೆ | 1986 |
| 27. | ಶ್ರೀ ಆರ್. ಎಂ. ಹಡಪದ | ಚಿತ್ರಕಲೆ | 1986 |
| 28. | ಶ್ರೀ ಎನ್. ನರಸಿಂಹಾಚಾರ್ | ಚಿತ್ರಕಲೆ | 1986 |
| 29. | ಎನ್. ಪುಷ್ಪಮಾಲಾ | ಚಿತ್ರಕಲೆ | 1986 |
| 30. | ಶ್ರೀ ಎಸ್.ಎನ್. ಚಂದ್ರಶೇಖರ್ | ಕಲಾವಿಮರ್ಶೆ | 1986 |
| 31. | ಶ್ರೀ ಇ. ಹನುಮಂತರಾವ್ | ಛಾಯಾಚಿತ್ರ | 1986 |
| 32. | ಶ್ರೀ ಎಲ್.ಪಿ. ಅಂಚನ್ | ಚಿತ್ರಕಲೆ | 1988 |
| 33. | ಶ್ರೀ ಎಂ.ಎ. ಚೆಟ್ಟಿ | ಚಿತ್ರಕಲೆ | 1988 |

